 **ಪ್ರಕಟಣೆ** 

ನಮ್ಮ ಕಂಪೆನಿಯಲ್ಲಿ ಐದು ಯಾ ಅದರ ಮೇಲೆ ಪಾಲು ಇರುವವರಿಗೂ,

ನಮ್ಮ ಕಂಪೆನಿಯಲ್ಲಿ ರೂ. **200/-** ಯಾ ಅದಕ್ಕಿಂತ ಹೆಚ್ಚು ನಿರಖು ಠೇವಣಾತಿ ಇಟ್ಟವರಿಗೂ

## ಅಂತರಂಗದ

ಸಂಚಿಕೆಗಳನ್ನು ಮುಫತ್ತಾಗಿ ಕೊಡುವುದೆಂತ ನಿಶ್ಚಯಿಸಿದ್ದೇವೆ. ಆದುದರಿಂದ ಸದ್ರಿ ಪಾಲುದಾರರೂ ಠೇವಣಾತಿದಾರರೂ ಪ್ರತ್ಯೇಕ ಚಂದಾಹಣವನ್ನು ಕಳುಹಿಸಬೇಕಾದುದಿಲ್ಲ

15-7-'38.
ಉಡುಪಿ.

ಎಸ್. ಯು. ಪಣಿಯಾಡಿ,
ಮೇನೇಜಿಂಗ್ ಡೈರೆಕ್ಟರ್
ಸಪ್ಲೈ ಏಜನ್ಸಿ ಲಿಮಿಟೆಡ್.



# ಅಂತರಂಗ



ವಿಶೇಷ ತರದ ಕನ್ನಡ ವಾರಪತ್ರಿಕೆ.
ಮಣಿಪಳ, ಉಡುಪಿ


ಸಂಪುಟ ೧.

೨೪ ಜುಲಾಯಿ '೩೮
ಆದಿತ್ಯವಾರ.

ಸಂಚಿಕೆ ೨.





ಮಾಲಕರು ಮುದ್ರಕರು ವ ಪ್ರಕಾಶಕರು:
ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.

ANNUAL
SUBSCRIPTION
RS. 3—0—0.

ಮುದ್ರಣ ವ ಪ್ರಕಟನ ಸ್ಥಳ:
ಮಣಿಪಳ ಪವರ್ ಪ್ರೆಸ್,
ಮಣಿಪಳ, ಉಡುಪಿ.

## ಬರೆಹಗಾರರಿಗೆ ಸಲಹೆ

೧. ಲೇಖನಗಳನ್ನೂ, ಕಿರುಗತೆಗಳನ್ನೂ, ಒಂದಂಕ ನಾಟಕಗಳನ್ನೂ ಯಾರೂ ಬರೆದು ಕಳುಹಿಸಬಹುದು.

೨. ಬರಹವು ಕಾಗದದ ಒಂದೇ ಮೈಯಲ್ಲಿ ಸ್ಪಷ್ಟವಾಗಿರಬೇಕು.

೩. ಯೋಗ್ಯ ಕಂಡವುಗಳನ್ನು ಮಾತ್ರ ಪ್ರಕಟಿಸಲಾದೀತು.

೪. ಪ್ರಕಟಿಸದಿದ್ದ ಲೇಖನಗಳನ್ನು ಬರೆಹಗಾರರ ಖರ್ಚಿನಿಂದಲೇ ವಾಪಾಸು ಕಳುಹಿಸಬಹುದು.

೫. ಪ್ರತಿಫಲವನ್ನು ಅಪೇಕ್ಷಿಸುವ ಲೇಖಕರು ಮುಂಚಿತವಾಗಿಯೇ ಪ್ರತಿಫಲದ ವ್ಯವಸ್ಥೆಯನ್ನು ನಮ್ಮ ಕೂಡೆ ಮಾಡಿಕೊಳ್ಳಬೇಕು.

೬. ಸಾಧಾರಣ ವರ್ತಮಾನಗಳನ್ನು ಯಾರೂ ನಮಗೆ ಕಳುಹಿಸಬೇಕಾದ ಅಗತ್ಯವಿಲ್ಲ. ನಾವವನ್ನು ಪ್ರಕಟಿಸುವುದಿಲ್ಲ.

ಸಂಪಾದಕ,

**ಅಂತರಂಗ,** ಉಡುಪಿ.

---

## ಪ್ರಕಟನೆ ಕೊಡುವವರಿಗೆ ಸಲಹೆ

೧. ಪ್ರಕಟನೆಯ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.

೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.

೩. ಬದಲಾವಣೆಯಿದ್ದಲ್ಲಿ ಒಂದು ವಾರ ಮುಂಚಿತವಾಗಿ ತಿಳಿಸಬೇಕು.

೪. ಬ್ಲೋಕುಗಳು ವಾಪಾಸು ಬೇಕಾಗಿದ್ದಲ್ಲಿ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.

೫. ಪ್ರಕಟನೆ ಬಾಬ್ತು ಹಣವನ್ನು ಮುಂಗಡವಾಗಿಯೇ ಕೊಡಬೇಕು.

### —: ಪ್ರಕಟನೆಯ ದರ :—

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ |
| ಅರ್ಧ | ,, | ,, | ೫—೮—೦ | ,, |
| ಕಾಲು | ,, | ,, | ೩— | ,, |
| ಅರೆಕಾಲು | ,, | ,, | ೨—೦—೦ | ,, |
| ಕಲಮು ಇಂಚಿಗೆ | | ,, | ೧—೦—೦ | ,, |

ಉಡುಪಿ. ಹೆಚ್ಚು ತರದ ಪ್ರಕಟನೆಗೂ, ವಾರ್ಷಿಕ ದರಕ್ಕೂ ಬರೆದು ತಿಳಿಯಿರಿ.

**ಪ್ರಕಟನ ಶಾಖೆ:—**

**ಅಂತರಂಗ, ಉಡುಪಿ.**

# ಅಂತರಂಗ

ವಿಶೇಷ ತರದ ಕನ್ನಡ ವಾರಪತ್ರಿಕೆ - - ಉಡುಪಿ

**ANTARANGA - - WEEKLY - - UDIPI**

ಸಂಪುಟ ೧ / ಸಂಚಿಕೆ ೨ | ರವಿವಾರ, ಜುಲಾಯಿ ೨೪, ೧೯೩೮ | Vol. I No. 2


## ಮಿಂಚಿನ ಬಳ್ಳಿ

“ನನಗೆ ಸಾಧ್ಯವಿದ್ದರೆ ಶಾಲೆಗಳಲ್ಲಿ ಹುಡುಗರ ಬದಲಿಗೆ ಹುಡುಗಿಯರಿಗೇ ಪ್ರವೇಶ ಕೊಡಿಸುತ್ತಿದ್ದೆ” ಎಂದರು ಮುಂಬಯಿಯ ಕೇಂದ್ರಾಯ ಮಂತ್ರಿಗಳಾದ ಮುರಾರ್ಜಿ ದೇಸಾಯಿಯವರು. ಇದಕ್ಕವರು ಕೊಟ್ಟ ಕಾರಣವೆಂದರೆ ರಜಪೂತ ಪುರುಷರಿಂದಲೂ ಸ್ತ್ರೀಯರೇ ಧೀರರೆಂದು. ಹಾಗಾದರೆ ಕೇಂದ್ರಾಯಮಂತ್ರಿಗಳ ಸ್ಥಾನವನ್ನು ಸ್ತ್ರೀಯರಿಗೆ ಕೊಡುವುದವಶ್ಯಕವಲ್ಲವೇ?

ಜ ಜ ಜ

ಅರ್ಜುನ್ ಪಟೇಲರು ಬಿಹಾರಿನಲ್ಲಿ ರಾಜೀ ಮಾಡಿ ಈಗ ಸಂಯುಕ್ತ ಪ್ರಾಂತ್ಯದ ಜಮೀನ್ದಾರ್-ಸರ್ಕಾರಗಳೊಳಗೆ ರಾಜಿ ಮಾಡಲಿದ್ದಾರೆ. ಸರಕಾರಗಳ ಮೇಲೆ ಅಧಿಕಾರ ನಡೆಸುವ ಶಾಂತ ಸರ್ವಾಧಿಕಾರಿಗಳಿವರು!

ಜ ಜ ಜ

ಡ್ಯೂಕ್ ಆಫ್ ವಿಂಡ್ಸರರಂತೆಯೇ ಹೋಲುವ ಒಬ್ಬ ಬ್ರಿಟಿಷ್ ಯುವಕನು ಸಿಲೋನಿನಿಂದಾಗಿ ಸ್ಟೀಮರಿನಲ್ಲಿ ಹೋದ ನಂತೆ. ಪ್ರತಿಯೊಬ್ಬರೂ ಅವನನ್ನು ವಿಂಡ್ಸರ್ ಡ್ಯೂಕರೆಂದು ಹೇಳುವುದರಿಂದ ಅವನಿಗೆ ಸಂಚರಿಸುವುದೂ ಕಷ್ಟವಾಗಿವೆಯಂತೆ. ಆದರೆ ಡಚೆಸ್ ಆಫ್ ವಿಂಡ್ಸರರಿಲ್ಲದೆ ಮಾಜಿ ಚಕ್ರವರ್ತಿಗಳು ಸಂಚರಿಸಲಾರರೆಂಬುದನ್ನು ಜನರೇಕೆ ಯೋಚಿಸುವುದಿಲ್ಲ?

ಜ ಜ ಜ

“ಭಾರತಕ್ಕೆ ಭಾರತೀಯರ ಸೈನ್ಯವೊಂದಿಲ್ಲದೆ ಗತ್ಯಂತರವಿಲ್ಲ”ವೆಂದಿದ್ದಾರೆ



ಮಧ್ಯಪ್ರಾಂತ್ಯದ ಮಾಜಿ ಮಂತ್ರಿಗಳಾದ ಮಿ| ಮಹಮದ್ ಶರೀಫರು ತನ್ನನ್ನು ಪುನಃ ಮಂತ್ರಿಮಂಡಲಕ್ಕೆ ಸೇರಿಸಿಕೊಳ್ಳಬೇಕೆಂದು ಕಾಂಗ್ರೆಸಿನೊಡನೆ ನಿವೇದಿಸಿಕೊಂಡಿದ್ದಾರೆ.

ಢಿಲ್ಲಿಯ ಮಿ| ಅಸಾಫಾಲಿಯವರು. ಅಕ್ಷರಶಃ ನಿಜ. ಶ್ರೀ. ಕೃಪಾಲಿನಿಯವರು ಕರಾಚಿಯಲ್ಲಿ ತನಗೆ ಭಾರತದ ಸೈನಿಕನಾಗುವುದರಲ್ಲಿ ಹೆಚ್ಚಿನ ಅಭಿಮಾನವೆಂದಿದ್ದಾರೆ. ಭಾರತದ ಸ್ವಂತ ಸೈನ್ಯವೊಂದಾಗುವುದಿದ್ದರೆ ಶ್ರೀ. ಕೃಪಾಲಿನಿಯವರನ್ನು ಒಬ್ಬ ದಳಪತಿಯನ್ನಾಗಿ ಮಾಡಲು ಮರೆಯಬಾರದೆಂದು ಸೂಚನೆ.

ಜ ಜ ಜ

“ಅವನ ಗಂಡ—ಅಥವಾ ಹೆಂಡತಿ” ಹೀಗೆಂದೊಡನೆಯೇ ಆಶ್ಚರ್ಯವಾಗಬಹುದು. ಪಂಜಾಬು ಎಸೆಂಬ್ಲಿಯ ಒಂದು ಮಸೂದೆಯಲ್ಲಿದ್ದ ವಾಕ್ಯದ ಅಂಶವಿದು. ಸರ್ ಗೋಕುಲ್ ಚಂದನಾರಂಗರು ಗಂಡಸರಿಗೆ ಗಂಡರಿದ್ದಾರೆಯೇ ಎಂದು ವಿಮರ್ಶಿಸಿದಾಗ ಎಲ್ಲರೂ ನಕ್ಕರಂತೆ. ಕೊನೆಗೆ ‘ಅವನ’ ಎಂಬ ಶಬ್ದವು ತೆಗೆದುಹಾಕಲ್ಪಟ್ಟಿತು. “ಅವನ” ಗಂಡಂದಿರು ಅನೇಕಮಂದಿ ಇದ್ದಾರೆಂದು ಗೋಕುಲಚಂದರಿಗೊಂದು ಗುಟ್ಟಿನ ಸೂಚನೆ. ಒಬ್ಬನ ಮೇಲೆ ಅವನ ಹೆಂಡತಿ ಅಧಿಕಾರ ನಡೆಸಿದರೆ ಅವಳನ್ನು “ಅವನ ಗಂಡ”ನೆಂದು ಕರೆಯುವುದುಂಟು.

ಜ ಜ ಜ

“ನೀವು ಸದಾ ಸತ್ಯಶೋಧನೆಯಲ್ಲೇ ನಿರತರಾಗಿರಿ,, ಎಂಬ ಉಪಯುಕ್ತ ಬುದ್ಧಿವಾದವನ್ನು ಬಂಗಾಳದ ಗವರ್ನರರಾದ ಸರ್ ರೋಬರ್ಟ್‌ರೀಡ್ ಇವರು ಬಂಗಾಳ ಸಾರಸ್ವತ ಸಮಾಜದವರಿಗೆ ಕೊಟ್ಟರು. ಈ ಬುದ್ಧಿವಾದದ ಇನ್ನೊಂದು ರೂಪವು ಹೀಗಿರಬಹುದೆ?: “ನೀವು ಸದಾ ಸತ್ಯಶೋಧನೆಯಲ್ಲಿ ನಿರತರಾಗಿರಿ; ನಾವು ನಿಮ್ಮ ಹಣದಿಂದಲೇ ನಿಮ್ಮಮೇಲೆ ಸದಾ ಅಧಿಕಾರ ನಡೆಸಿ ಆನಂದಿಸುತ್ತೇವೆ”

# ಬ್ರಿಟನ್-ಜರ್ಮನಿಗಳ ಯುದ್ಧ

## 'ಭಾರತದ ಸ್ವಂತ ಸೈನ್ಯವು

## ಕಾಂಗ್ರೆಸ್ ಮಂತ್ರಿಗಳು ಸೈನಿಕ

## ಲೋಕಮಹಾ ಯುದ್ಧದಲ್ಲಿ ಪ್ರಜಾಸತ್ತಾತ್ಮಕ ರಾಷ್ಟ್ರಗಳು ಒಂದಾಗುತ್ತವೆ. *

## ಲಂಡನಿನಲ್ಲಿ ಪಂಡಿತ ನೆಹರುಗಳು ಭಾರತದ

**ಲಂಡನಿನಲ್ಲಿ ಪಂಡಿತ ನೆಹರುಗಳ ವಿ ರಣೆ**

ಜವಾಹರಲಾಲರೊಡನೆ ಹಿಂದುಸ್ಥಾನದ ಕುರಿತು ಮಾತುಕತೆ ನಡೆಸುವಾಗ ಕಂಡುಬರುವ ಸ್ವಾರಸ್ಯದ ವಿಷಯುವೆಂದರೆ ಲೋಕದ ರಾಜಕಾರಣದಲ್ಲಿ ಭಾರತೀಯರು ಮಹತ್ವದ ಭಾಗ ವಹಿಸಲಿದ್ದಾರೆಂಬುದಾಗಿದೆಯೆಂದು ಲಂಡನಿನ "ಡೈಲೀ ವರ್ಕರ್" ಎಂಬ ಪತ್ರಿಕೆಯಲ್ಲಿ ರಿಚಾರ್ಡ್ ಗುಡ್‌ಮೇನ್ ಎಂಬವರು ಬರೆಯುತ್ತಾರೆ.

ಈ ಕುರಿತು ಪಂಡಿತ ನೆಹರುಗಳಿಗೆ ಕೂಡಾ ಯಾವ ಸಂಶಯುವೂ ಇಲ್ಲ.

**ಅಂತರ್ ರಾಷ್ಟ್ರೀಯ ಮನೋವೃತ್ತಿ**

ಅವರು ಲಂಡನಿಗೆ ಬಂದೊಡನೆಯೇ ಅವರನ್ನು ನಾನು ಕಂಡು ಮಾತಾಡಿದಾಗ ಹೀಗೆಂದರು: "ಭಾರತದ ಕುರಿತು ಹೇಳಬೇಕಾದ ಒಂದು ಗಣನೀಯ ವಿಚಾರವೆಂದರೆ ಇತ್ತೀಚೆಗೆ ನಾವು ಅಂತರ್ ರಾಷ್ಟ್ರೀಯ ವಿಚಾರಗಳಲ್ಲಿ ಹೆಚ್ಚೆಚ್ಚು ಅಭಿರುಚಿಯನ್ನು ತೆಗೆದುಕೊಳ್ಳುತ್ತಿರುವುದಾಗಿದೆ. ಇದು ಭಾರತಕ್ಕೆ ಸಂಬಂಧಪಟ್ಟ ವಿಚಾರ



ಪಂಡಿತ ನೆಹರುಗಳೊಡನೆ ಬ್ರಿಟಿಷ್ ಸರಕಾರದ ಪ್ರತಿನಿಧಿಗಳು ಫೆಡರೇಶನಿನ ಕುರಿತು ಮಾತುಕತೆಯನ್ನು ಕಳೆದ ವಾರ ನಡೆಸಿದರು.

ಗಳಲ್ಲಿ ಮಾತ್ರವಲ್ಲ; ಭಾರತದ ಸಮಸ್ಯೆಯು ಜಗತ್ತಿನ ಸಮಸ್ಯೆಯ ಪ್ರಾಮುಖ್ಯಾಂಶಗಳಲ್ಲೊಂದಾಗಿ ಪರಿಣಮಿಸಿರುವುದರಿಂದಾಗಿ ಈ ಬದಲಾವಣೆಯು ಉಂಟಾಗಲಾರಂಭಿಸಿದೆ."

**ಫೇಸಿಸಮಿಗೆ ವಿರೋಧ**

ಮೂಲತಃ ಭಾರತದ ಜನರು ಫೇಸಿಸಮಿನ ವಿರೋಧಿಗಳು. ಪಾಶ್ಚಾತ್ಯದಲ್ಲಿರುವಷ್ಟು ಹೆಚ್ಚಿನ ವೈರತ್ವವು ಅವರಲ್ಲಿಲ್ಲದಿರುವುದು ಸ್ವಾಭಾವಿಕವಾಗಿದೆ. ಕಾರಣ-ಅದು ಅವರ ಮಹತ್ವದ ಸಮಸ್ಯೆಯಲ್ಲ. ಸಾಮ್ರಾಜ್ಯಶಾಹಿಗೆ ವಿರೋಧವಾದ ಭಾರತೀಯರು ಸ್ವಾಭಾವಿಕವಾಗಿ ಫೇಸಿಸಮಿಗೆ ವಿರೋಧವಾಗಿರಲೇಬೇಕು. ಸ್ಪೈನಿನ ರಿಪಬ್ಲಿಕ್‌ನೊಡನೆ, ಜಪಾನಿನ ಮಿಲಿಟರಿ ಫ್ಯಾಸಿಸ್ಟ್ ಸಾಮ್ರಾಜ್ಯಶಾಹಿಯೊಡನೆ ಹೋರಾಡುತ್ತಿರುವ ಚೀನದ ಜನರೊಡನೆ ಅವರಿಗೆ ಸಹಾನುಭೂತಿಯಿದೆ.

**ಶಾಂತಿಸಂರಕ್ಷಣೆಗಾಗಿ**

ವಸ್ತುಸ್ಥಿತಿಯು ಹೀಗಿರುವಾಗ ಭಾರತೀಯರು ಬ್ರಿಟಿಷ್ ಸರಕಾರದ ವಿದೇಶ ಧೋರಣೆಯನ್ನು ವಿರೋಧಿಸುವುದಲ್ಲದೆ ಅವರೊಂದಿಗೆ ಸಹಕರಿಸುವುದು ಅವರಿಗೆ ಸಲ್ಲದ ಕೆಲಸ

# ದಲ್ಲಿ ಭಾರತವು ಕೈಹಾಕುವುದಿಲ್ಲ!

# ಕ್ಷಿಪ್ರದಲ್ಲಿಯೇ ತಯಾರಾಗಬೇಕು.'

## ಶಿಕ್ಷಣವನ್ನು ಕೊಡಿಸುತ್ತಿದ್ದಾರೆ.

## ಫೆಡರೇಶನನ್ನು ಧ್ವಂಸಗೊಳಿಸಲು ಕಾಂಗ್ರೆಸಿನ ಪ್ರಬಲ ಸಿದ್ಧತೆಗಳು.

*

## ಭಾವೀ ಧೋರಣೆಯನ್ನು ಜಗತ್ತಿಗೆ ಸಾರಿದರು!

ವಾಗಿದೆ. ಈ ಅಭಿಪ್ರಾಯವು ಫೆಬ್ರವರಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಸ್ಪಷ್ಟ ಪಡಿಸಲ್ಪಟ್ಟಿತಲ್ಲದೆ ಶಾಂತಿಯನ್ನು ರಕ್ಷಿಸಲು ತಯಾರಾಗಿರುವ ರಾಷ್ಟ್ರಗಳೊಡನೆ ಸ್ವತಂತ್ರ ಭಾರತವು ಸಹಕರಿಸಬೇಕೆಂಬುದೇ ಅದರ ಚರಿತ್ರಾರ್ಹ ಠರಾವಿನಿಂದ ವಿಶದವಾಗುತ್ತದೆ.

**ವಿಮೋಚನಾ ಯತ್ನ**

ಭಾರತದ ಸಮಸ್ಯೆಯನ್ನು ಸರಿಯಾಗಿ ತಿಳಿಯಬೇಕಾದರೆ ಭಾರತೀಯರು ತಮ್ಮ ಆರ್ಥಿಕ ಮತ್ತು ರಾಜಕೀಯ ಸ್ವಾತಂತ್ರ್ಯವನ್ನು ಬ್ರಿಟನಿನಿಂದ ಪಡೆಯುವ ದೃಢ ನಿರ್ಧಾರವನ್ನು ಮಾಡಿದ್ದಾರೆಂಬುದನ್ನು ತಿಳಿಯಬೇಕು. ಬ್ರಿಟನು ಯಾವ ಬಿಕ್ಕಟ್ಟಿನಲ್ಲಿ ಬಿದ್ದರೂ ಭಾರತವು ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತನ್ನ ವಿಮೋಚನೆಯನ್ನು ಮಾಡಿಕೊಳ್ಳುವ ಯತ್ನವನ್ನು ಪೂರೈಸಿಯೇ ತೀರುವುದು.

**ಬ್ರಿಟನಿನೊಡನೆ ಅಸಹಕಾರ**

"ಹೀಗೆ ಜರ್ಮನಿಯು ಜೆಕೊಸ್ಲೋವೇಕಿಯವನ್ನು ಮುತ್ತಿದ ದೆಸೆಯಿಂದ ಬ್ರಿಟನು, ಇಟಲಿ ಜರ್ಮನಿಗಳೊಂದಿಗೆ ಯುದ್ಧವನ್ನು ಪ್ರಾರಂಭಿಸಿತೆಂದು ಭಾವಿಸೋಣ. ಈ ಪರಿಸ್ಥಿತಿಯುಂಟಾದರೆ ಬ್ರಿಟಿಷರು ಭಾರತದಲ್ಲಿ ತಮ್ಮ ಅಸ್ತಿತ್ವವನ್ನು ಇನ್ನಷ್ಟು ಬಲಪಡಿಸುವರೆಂಬುದರಲ್ಲಿ ಸಂಶಯವಿಲ್ಲ."



ಯುದ್ಧವನ್ನು ಹೇಗಾದರೂ ತಪ್ಪಿಸಿ ಜಗತ್ತಿನಲ್ಲಿ ಶಾಂತಿಯನ್ನು ರಕ್ಷಿಸಲು ಸರ್ವಾಧಿಕಾರಿಗಳೊಡನೆ ಮಾತುಕತೆ ನಡೆಸುವುದರಲ್ಲಿ ಇನ್ನೂ ವಿಶ್ವಾಸವಿಟ್ಟಿರುವ **ಜಾರ್ಜ್ ಲ್ಯಾನ್ಸ್‌ಬರಿಯವರು**

"ಆದರೆ ಭಾರತದ ಜನರು ಎರಡು ಕಾರಣಗಳಿಂದಾಗಿ ಅಂತಹ ಯತ್ನವನ್ನು ವಿರೋಧಿಸಬಹುದು."

"ಭಾರತೀಯರ ಧ್ಯೇಯವು ಸ್ವಾತಂತ್ರ್ಯವಾಗಿರುವುದರಿಂದ ಅವರೇ ನಿಶ್ಚೈಸದ ಯುದ್ಧದಲ್ಲಿ ಹಿಂದುಸ್ಥಾನದ ಜನರು ಎಂದೂ ಭಾಗವಹಿಸಲಾರರು.

"ಬ್ರಿಟಿಷ್ ಆಳ್ವಿಕೆಗೆ ಒಳಗಾಗಿರುವಾಗ ತಮ್ಮ ನಿರ್ಧಾರಗಳಿಗನುಸಾರವಾಗಿ ನಡೆಯುವುದು ಅಸಾಧ್ಯ ಕೆಲಸವಾಗಿದೆ.

"ಆದುದರಿಂದ ನಮ್ಮ ಪ್ರಥಮ ಕೆಲಸವೆಂದರೆ ನಮ್ಮ ಸ್ವಾತಂತ್ರ್ಯವನ್ನು ಪಡೆಯುವುದಾಗಿದೆ.

"ಎರಡನೆಯದಾಗಿ - ಚೀನಾ ಸ್ಪೈನುಗಳಿಂದ ನಮಗೆ ತಿಳಿಯುವಂತೆ ಫ್ಯಾಸಿಸಮನ್ನು ಪೂರ್ಣವಾಗಿ ಸೋಲಿಸಬೇಕಾದರೆ ಅದಕ್ಕೆ ವಿರೋಧವಾಗಿರುವ ಎಲ್ಲಾ ಶಕ್ತಿಗಳು ಒಂದಾಗಿ ಒಂದೇ ರೀತಿಯಲ್ಲಿ ವರ್ತಿಸಬೇಕಾಗುತ್ತದೆ.

"ಹೀಗೆ ಬ್ರಿಟನಿನ ಫ್ಯಾಸಿಸ್ಟ್ ವಿರೋಧಿಗಳು ಯಾವ ರೀತಿಯಲ್ಲಿ ಈ ಸಮಸ್ಯೆಯನ್ನು ಎದುರಿಸುತ್ತಾರೋ ಅದೇ ರೀತಿಯಲ್ಲಿ ಭಾರ

ತೀಯರೂ ವರ್ತಿಸಬೇಕಾಗುತ್ತದೆ. ಯುದ್ಧವು ಪ್ರಜಾಸತ್ತಾತ್ಮಕವಾಗಿ, ಫ್ಯಾಸಿಸಮಿಗೆ ವಿರೋಧವಾಗಿ ನಡೆದರೆ ಇದರಿಂದ ನಮ್ಮ ಸಮಸ್ಯೆಯನ್ನು ನಾವು ಬಗೆಹರಿಸಿದಂತಾಗುತ್ತದೆ.

**ಅಸಹಕಾರ.**

ಹೀಗೆ ಮಾತು ಕತೆಗಳು ನಡೆಯುತ್ತಿದ್ದಾಗ ಸ್ವಾಭಾವಿಕವಾಗಿ ಅಂತಹ ಪರಿಸ್ಥಿತಿಯು ಬಂದೊದಗಿದರೆ ಭಾರತವು ಬ್ರಿಟನಿನೊಡನೆ ಅಸಹಕಾರವನ್ನು ಹೇಗೆ ನಡೆಸುವುದೆಂಬ ಪ್ರಶ್ನೆಯೂ ಬಂತು.

ಈ ವಿಚಾರದಲ್ಲಿ ಕೂಡಾ ಪಂಡಿತ ನೆಹರುಗಳು- ಭಾರತೀಯರು ಸಾಮ್ರಾಜ್ಯಶಾಹಿಯ ವಿರೋಧಿಗಳೆಂದು ಪುನಃ ಹೇಳಿ ಅವರು "ಅಸಹಕಾರ"ವನ್ನಾದರೂ ಮಾಡಿಯೇ ಮಾಡುವರೆಂದು ಹೇಳಿದರು.

**ಭಾರತದಲ್ಲಿ ಬದಲಾವಣೆ.**

ಇತ್ತೀಚೆಗೆ ಭಾರತದ ಪರಿಸ್ಥಿತಿಯು ಪೂರ್ಣ ಬದಲಾಗಿದೆಯೆಂದು ಹೇಳಿ ರೈತರು ತೆರಿಗೆಯನ್ನು ಕೊಡದಂತೆ ಮಾಡುವುದು ಅತ್ಯಂತ ಸುಲಭದ ಕೆಲಸವೆಂದರು ನೆಹರುಗಳು.

ಕಾಂಗ್ರೆಸು ಜನರೊಡನೆ ತೆರಿಗೆ ಕೊಡಬಾರದೆಂಬ ಬಿನ್ನಹವನ್ನು ಮಾಡಿಕೊಂಡರೆ ಅದುವೇ ದೊಡ್ಡ ಬಿಕ್ಕಟ್ಟಾಗಿ ಪರಿಣಮಿಸಬಹುದು.

ಇಷ್ಟು ಮಾತ್ರವಲ್ಲ. ಈಗಿನ ಭಾರತೀಯ ಸೈನ್ಯವು ರೈತಜನರಿಂದೊಡಗೂಡಿದೆ. ಭಾರತೀಯ ಸೈನಿಕರು ರಜೆಯಲ್ಲಿ ತಮ್ಮ ಹಳ್ಳಿಗಳಿಗೆ ಹೋಗಿ ಜನರೊಡನೆ ಸಂಬಂಧವನ್ನು ಬೆಳೆಸಿಕೊಳ್ಳುತ್ತಾರೆ. ಹೀಗೆ ಭಾರತದಲ್ಲಿ ರೈತರ ಮಹತ್ವದ ಚಳವಳವು ಪ್ರಾರಂಭವಾದರೆ ಅದರ ಪ್ರಭಾವವು ಸೈನ್ಯಕ್ಕೂ ಹಬ್ಬದಂತೆ ಮಾಡುವದು ಬ್ರಿಟಿಷರಿಗೆ ಸಾಧ್ಯವಾಗದ ಕೆಲಸವಾಗಿದೆ.

"ಇಂದು ಸೈನ್ಯವು ಯೋಗ್ಯ ಪರಿಸ್ಥಿತಿಯಲ್ಲಿದೆ. ಅದರಲ್ಲಿ ಭಾರತೀಯ ರೈತರಿದ್ದಾರೆಂಬ ಕಾರಣದಿಂದಲೇ ಅದನ್ನು "ವಿಶ್ವಸನೀಯ" ಸೈನ್ಯವೆಂದು ಬ್ರಿಟಿಷರು ತಿಳಿಯಲಾಗುವುದಿಲ್ಲ.

**ಸೈನಿಕ ಶಿಕ್ಷಣ.**

ಹೀಗೆ ಇದರಿಂದ ಎಂದಾದರೂ, ಆದಷ್ಟು ಬೇಗನೆ, ಭಾರತೀಯರು ತಮ್ಮದೇ ಆದ, ಜನಪ್ರೀತವಾದ, ಚೀನದ ರಾಷ್ಟ್ರೀಯ ಕ್ರಾಂತಿಕಾರ ಸೈನ್ಯದಂತೆ, ಸ್ಪೈನಿನ ಜನಸೈನ್ಯರದಂತೆ, ಅವರ ಸೈನ್ಯವನ್ನು ಮಾಡುವುದು ಅತ್ಯವಶ್ಯವಲ್ಲವೇ ಎಂಬ ಪ್ರಶ್ನೆಯುತ್ಪನ್ನವಾಗುತ್ತದೆ.

**ಭಾರತಕ್ಕೆ ಸ್ವಂತಸೈನ್ಯ.**

ಹೇಗಿದ್ದರೂ ಅಂತಹ ಒಂದು ಸೈನ್ಯವು ತಯಾರಾಗಬೇಕೆಂದು ಪಂಡಿತ ನೆಹರುಗಳು ಅಭಿಪ್ರಾಯಪಟ್ಟರು. ಈ ಕಾರ್ಯವನ್ನು ಸಾಧಿಸುವರೆ ಅಸಂಖ್ಯಾತ ಕಷ್ಟಗಳಿವೆ. ಇದು ಭಾರತಕ್ಕೆ ಹೊಸತಾದುದಲ್ಲ. ಎಲ್ಲಾ ಸೈನ್ಯಗಳನ್ನು ರಚಿಸುವಾಗ ಅಧಿಕಾರಿಗಳ, ದಳಪತಿಗಳ ಪ್ರಶ್ನೆಯು ಬಂದೇ ಬರುತ್ತದೆ.

"ಜವಾಬ್ದಾರಿಯುಳ್ಳ ಭಾರತೀಯರು ಈ ಸಮಸ್ಯೆಯು ಅತ್ಯಂತ ಪ್ರಾಮುಖ್ಯವಾದುದೆಂದು ಈಗಲೇ ಮನಗಂಡಿದ್ದಾರೆ.

ಈಗಾಗಲೇ ಅದು ಅತ್ಯವಶ್ಯವಾದ ಸಂಗತಿಯೆಂದು ಜನರಿಂದ ಭಾವಿಸಲ್ಪಟ್ಟಿದೆ ಈಗ ಬೇರೆ ಬೇರೆ ಕಾಂಗ್ರೆಸ್ ಮಂತ್ರಿಗಳು ಜನರಿಗೆ ಸಾಮಾನ್ಯತರದ ಸೈನಿಕ ಶಿಕ್ಷಣವನ್ನು ಕೊಡುವ ವಿಚಾರದಲ್ಲಿ ಯೋಚನೆಯನ್ನು ಮಾಡುತ್ತಿದ್ದಾರೆ. ಇದು ನಿಜವಾದ ಸೈನಿಕಶಿಕ್ಷಣವಾಗದಿರುವುದಿದ್ದರೂ ಅದಕ್ಕಾಗಿ ಮಾಡುವ ಮೊದಲಯತ್ನವಾಗಿದೆ.

**ಬ್ರಿಟಿಷರ ವಿರೋಧ.**

ಅಂತಹ ಪ್ರತಿಯೊಂದು ಯತ್ನವೂ ಬ್ರಿಟಿಷರಿಗೆ ಸರ್ವಥಾ ರುಚಿಸಲಾರದೆಂಬುದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಹೀಗೆ ಪ್ರಾಂತ್ಯಗಳಲ್ಲಿ ಮಾತ್ರವಲ್ಲ, ಕೇಂದ್ರದಲ್ಲಿಯೂ ಕಾಂಗ್ರೆಸಿಗೆ ಅಧಿಕಾರವಿರಬೇಕೆಂಬ ಪ್ರಶ್ನೆಯುತ್ಪನ್ನವಾಗುತ್ತದೆ.

ಬಿಕ್ಕಟ್ಟಿನ ಪ್ರಸಂಗದಲ್ಲಿ ಕೇಂದ್ರ ಸರಕಾರದೊಡನೆ ಕಾಂಗ್ರೆಸ್ ಪ್ರಾಂತಿಕ ಸರಕಾರಗಳು ಸಹಕರಿಸದಿದ್ದರೆ ಸ್ವಾಭಾವಿಕವಾಗಿ ಅವರನ್ನು ಡಿಸ್‌ಮಿಸ್ ಮಾಡಬಹುದು. ಅಂತಹ ಸಂದರ್ಭದಲ್ಲಿ ಬ್ರಿಟಿಷರ ಮುಂದಿರುವ ಎರಡು ವಿಧಾನಗಳೆಂದರೆ -ಹೊಸ ಚುನಾವಣೆಗಳನ್ನು ನಡಿಸುವಂತಹುದು ಅಥವಾ ಗವರ್ನರರ ಮೂಲಕವೇ ಅಧಿಕಾರ ನಡೆಸುವುದು. ಹೊಸ ಚುನಾವಣೆಗಳಾದರೆ ಕಾಂಗ್ರೆಸಿನ ಶಕ್ತಿಯು ಮತ್ತಷ್ಟು ವರ್ಧಿಸಿದಂತಾಗುತ್ತದೆ ಗವರ್ನರರ ಮೂಲಕ ಅಧಿಕಾರ ನಡೆಸುವುದರಿಂದ ಇನ್ನಷ್ಟು ದೊಡ್ಡ ವಿಷಮ ಪರಿಸ್ಥಿತಿಯುಂಟಾಗುವುದ ಖಂಡಿತ.

**ಕೇಂದ್ರಾಧಿಕಾರ.**

ಹೀಗೆ ಅತ್ಯಂತ ಪ್ರಾಮುಖ್ಯಾವಶ್ಯಕತೆ ಹೊಂದಿರೆ ಕೇಂದ್ರದಲ್ಲಿ ಇನ್ನ

ಹೆಚ್ಚು ಅಧಿಕಾರ ಸಿಗಬೇಕಾದು. ಇಂಡಿಯಾ ಸರಕಾರದ ಫೆಡರಲ್ ಯೋಜನೆಯ ವಿರೋಧ ನಡೆಯುವ ಸಮರದ ಸಾರವೇ ಇದಾಗಿದೆ.

ನಮ್ಮ ಮಾತು ಪ್ರಾರಂಭವಾದಂತೆಯೇ ಅಂತ್ಯವಾಯಿತು.

"ಎಂದಿನಂತೆ ಭಾರತೀಯ ಸಮಸ್ಯೆಗಳನ್ನು ಸಿಕ್ಕಾಬಟ್ಟೆ ಕಂಡು, ಬಗೆಹರಿಸಬಹುದೆಂಬ ಭಾವನೆಯನ್ನು ಬ್ರಿಟಿಷರು ಬಿಟ್ಟುಬಿಡಬೇಕಾಗಿದೆ.

**ಫೆಡರೇಶನಿನ ನಿರ್ನಾಮ.**

"ಫೆಡರೇಶನನ್ನು ಜಾರಿಗೆ ತರುವ ಯಾವ ಯತ್ನವಾದರೂ ಮಹತ್ವದ ವಿರೋಧವನ್ನು ತಡೆದುಕೊಳ್ಳಬೇಕಾದೀತು. ಇದನ್ನು ಹೋಗಲಾಡಿಸಬೇಕಾದರೆ ನಮ್ಮ ಮುಂದಿರುವ ಏಕಮಾತ್ರ ವಿಧಾನವೆಂದರೆ ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಭಾರತದಿಂದ ಹೊಡೆದೋಡಿಸುವುದಾಗಿದೆ.

"ಫ್ಯಾಸಿಸಮಿಗೆ ವಿರೋಧಿಗಳಾದ ಬ್ರಿಟಿಷ್ ಜನರು ತಮ್ಮ ವಿರೋಧವನ್ನು ಯಶಸ್ವಿಯನ್ನಾಗಿ ಮಾಡಬೇಕಾದರೆ ಸಾಮ್ರಾಜ್ಯಶಾಹಿಗೆ ವಿರೋಧವಾಗಿ ನಡೆಯುವ ಸಮರವನ್ನು ಅಲಕ್ಷಿಸಬಾರದು. ಸ್ಪೈನ್, ಚೀನ ಮತ್ತು ಭಾರತದ ವಾಯುವ್ಯ ಸರಹದ್ದಿನಲ್ಲಿ ಬಾಂಬೆಸೆಯುವುದನ್ನು ಖಂಡಿಸುವಷ್ಟೇ ಈ ಕಾರ್ಯವೂ ಸುಲಭವಾಗಿದೆ" ಎಂದರು ಪಂಡಿತ ನೆಹರುಗಳು. ———

---

"ಸಮಾಧಾನವೊಂದಿದ್ದರೆ ಏನೂ ಮಾಡಬಹುದು" ಎಂದನೊಬ್ಬ ಮುದುಕ.

"ಛೆ: ಅದು ಸುಳ್ಳು, ತೂತಿರುವ ಕುಕ್ಕೆಯಲ್ಲಿ ನೀರು ಕೊಂಡೊಯ್ಯಲು ಸಾಧ್ಯವಿದೆಯೆ?" ಎಂದನೊಬ್ಬ ಯುವಕ.

"ಓಹೋ, ಏನಡ್ಡಿ, ಸಮಾಧಾನದಿಂದ ಅದು ಹಿಮಗಡ್ಡೆ ಯಾಗುವ ತನಕ ಕಾಯಬೇಕು.

* * *

"ಅಮ್ಮಾ, ನಾ ನೀರೊಟ್ಟೆ ತಿನ್ನೋದಿಲ್ಲ."

"ಹಾಗಾದರೆ ಅದನ್ನು ನಾಯಿಗೆ ಹಾಕು."

"ಅದೂ ತಿನ್ನುವುದಿಲ್ಲ"

"ಹಾಗಾದರೆ ಅಲ್ಲಿಯೇ ಇಡು. ನಿನ್ನ ಅಪ್ಪ ತಿಂದಾರು."

* * *

# ಓದುಗರ ಪುಟ

**ಶ್ರೀ. ಡಿ. ವಿ. ಯಸ್., ಕುಂದಾಪುರ.**

"......ಹೀಗೆ ದಕ್ಷಿಣ ಕನ್ನಡದಲ್ಲಿ ಪ್ರತಿದಿನಕ್ಕೊಂದರಂತೆ ಹೊರಡುವ ಏಳು ವಾರ ಪತ್ರಿಕೆಗಳಿದ್ದರೂ "ಅಂತರಂಗ"ವು ಎಂಟನೆಯದಾಗಿ ಏಕೆ ಹೊರಟಿತು? ಬದಲಿಗೆ ಇದ್ದ ಪತ್ರಿಕೆಯವರೆಲ್ಲಾ ಒಟ್ಟುಗೂಡಿ ಉತ್ತಮವಾದೊಂದು ದಿನಪತ್ರಿಕೆಯನ್ನು ಹೊರಡಿಸಬಾರದಿತ್ತೆ?"

ನಿಮ್ಮ ಯೋಗ್ಯ ಸೂಚನೆಗಾಗಿ ಅಭಿನಂದಿಸುತ್ತೇನೆ. ನಮ್ಮ ನಾಡಿನಲ್ಲಿ ಅಸಂಖ್ಯಾತ ಮನೆಗಳಿರುವಾಗ, ಇನ್ನೂ ಹೊಸ ಹೊಸ ಮನೆಗಳನ್ನು ಕಟ್ಟುವುದರ ಬದಲು ಎಲ್ಲಾ ಮನೆಯವರೂ ಒಟ್ಟಿಗೆ ಸೇರಿ ದೊಡ್ಡದೊಂದು ಮನೆಯನ್ನು ಕಟ್ಟಿಕೊಂಡು ಸುಖವಾಗಿ ಬಾಳಬಾರದೇಕೆಂದು ನನಗೆ ಬಹಳ ದಿನಗಳ ಹಿಂದೆಯೇ ಹೊಳೆದಿತ್ತು. ಆದರೆ ಇತ್ತೀಚೆಗೆ ಒಂದು ಕತೆ ನಡೆದು ಹೋಯಿತು. ನನ್ನ ಹೆಂಡತಿಗೂ ನನ್ನ ತಮ್ಮನ ಹೆಂಡತಿಗೂ ಮೊನ್ನೆ ಜಗಳವಾಗಿ ಅವರು ಬೇರೆಯೇ ಒಂದು ಮನೆಯನ್ನು ಈಗ ಕಟ್ಟುತ್ತಿದ್ದಾರೆ. ಹೇಗೂ ಇರಲಿ. ಇದೇ ಪ್ರಶ್ನೆಯನ್ನು ನೀವು ಇತರ ಪತ್ರಿಕೆಗಳಿಗೂ ಕೇಳಿ ಪತ್ರಿಕೆಗಳ ಏಕೀಕರಣವನ್ನು ಸಾಧಿಸಿದರೆ, ಹಿಂದೂ ಮುಸ್ಲಿಮ್ ಐಕ್ಯ ಸಾಧಿಸಿದಷ್ಟೇ ಪುಣ್ಯ ಬಂದೀತೆಂದು ನನ್ನದೊಂದು ಉಪಸೂಚನೆ!

* ಂ *

**ಶ್ರೀ. ಕೆ. ವಿ. ಪಿ. -ಕಾರವಾರ**

"ನಾನು ಭಾರತದ ಜನತಾಸೇವೆ ಮಾಡುವುದಕ್ಕಾಗಿ ಹಾತೊರೆಯುವ ನವಯುವಕನಾಗಿದ್ದೇನೆ. ಈಗಿರುವ ಪಕ್ಷಗಳಲ್ಲಿ ಯಾವ ಪಕ್ಷವನ್ನು ಸೇರಿದರೆ

**[ನಮ್ಮ ವಾಚಕರಲ್ಲಿ ಕೆಲವರು ನಮಗೆ ಕೆಲವು ವಿಚಿತ್ರ ಪ್ರಶ್ನೆ ಕೇಳಿ ಪತ್ರ ಬರೆದಿರುತ್ತಾರೆ. ಅವುಗಳನ್ನು ಪ್ರತ್ಯೇಕವಾಗಿ ಉತ್ತರಿಸುವುದು ಸಾಧ್ಯವಿಲ್ಲದಿದ್ದುದರಿಂದ ಅಂತರಂಗದಲ್ಲಿ ಈ ಪುಟವನ್ನು ಓದುಗರಿಗಾಗಿ ಮೀಸಲಾಗಿರಿಸಿದೆ.]**

ನನ್ನ ಇಚ್ಛಾಪೂರ್ತಿಯಾದೀತೆಂಬ ಅಂತರಂಗವನ್ನು ತಿಳಿಸುವಿರಾ?"

ಪ್ರಾಯಶಃ ನೀವು ಅನುಭವವಿಲ್ಲದ ನವಯುವಕರಾಗಿರಬೇಕು. ನಿಜವಾಗಿ ಭಾರತದಲ್ಲಿ ಪಕ್ಷಗಳೇ ಇಲ್ಲ. ನಿಮ್ಮ ಜೇಬಿನಲ್ಲಿ ಇತ್ತೀಚೆಗೆ ದೊರೆತ ವರದಕ್ಷಿಣೆಯ ಹಣವೇನಾದರೂ ಇದೆಯೆ? ಇದ್ದರೆ ಯಾವ ಪಕ್ಷದಲ್ಲಿಯೂ ಕೂಡಿ ಜನತಾಸೇವೆ ಮಾಡುವ ಸಂದರ್ಭವು ಉಂಟೇ ಉಂಟು. ಹಾಗಿದ್ದರೆ ನಿಮ್ಮ ಸ್ವಂತ ಪಕ್ಷವನ್ನೇ ಮಾಡಿಕೊಂಡರೂ ಬೆಂಬಲ ಇದ್ದೇ ಇದೆ.

* ಂ *

**ಮಿ/ ಮೊಹಿಯುದ್ದೀನ್, ಮಂಗಳೂರು.**

"......ನಾನೊಬ್ಬ ಮುಸ್ಲಿಮ್ ಯುವಕ. ನನ್ನಲ್ಲಿ ಜಾತೀಯ ಭಾವನೆಯೇ ಇಲ್ಲ. ನನಗೆ ಅಂತರ್ಜಾತೀಯ ವಿವಾಹವಾಗಬೇಕೆಂಬ ಇಚ್ಛೆಯಿದೆ. ನನ್ನ ಇಚ್ಛೆಯನ್ನು ಪೂರೈಸಬೇಕಾದರೆ ನಾನೇನು ಮಾಡಬೇಕು?"

ನಿಮ್ಮ ವಿಶಾಲ ಮನೋವೃತ್ತಿಗಾಗಿ ಸಂತೋಷ ಪಡುತ್ತೇನೆ. ಹುಡುಗಿ ನಿಶ್ಚಯವಾಗುವ ವರೆಗೆ ಅವಳ ಜಾತಿಯವರೊಡನೆ ಸ್ನೇಹ ಮಾಡಿಕೊಳ್ಳಬೇಕು. ನಿಶ್ಚಯವಾಗಿ ಮದುವೆಯಾಗುವ ವರೆಗೆ ನಿಮ್ಮ ಜಾತಿಯವರ ಸ್ನೇಹವನ್ನು ಮಾಡಿಕೊಳ್ಳಬೇಕು. ಏನು ಮಾಡಿದರೂ ಕಾನೂನಿನಿಂದ ತಲೆತಪ್ಪಿಸಿಕೊಳ್ಳಿ.

* ಂ *

**ಶ್ರೀ. ಶಿವರಾಮ.... ಕಾರ್ಕಳ.**

"......ನಾನು ಅನೇಕ ಕತೆ ಕವಿತೆಗಳನ್ನು ಬರೆದು ಅಂಚೆ ಚೀಟಿನೊಂದಿಗೆ ಹೆಚ್ಚು ಕಡಿಮೆ ಎಲ್ಲಾ; ಪತ್ರಿಕೆಗಳಿಗೂ ಕಳುಹಿಸಿದ್ದೇನೆ. ಆದರೆ ಯಾವ ಪತ್ರಿಕೆಯೂ ಪ್ರಕಟಿಸಲೂ ಇಲ್ಲ. ಹಿಂದೆ ಕಳುಹಿಸಲೂ ಇಲ್ಲ. ನಾನು ಕಳುಹಿಸಿದ ಚೀಟುಗಳ ಅವಸ್ಥೆಯೇನಾಯಿತೆಂದು ಗೊತ್ತಿಲ್ಲ..."

ಇಷ್ಟೂ ಗೊತ್ತಾಗುವುದಿಲ್ಲವೆ ನಿಮಗೆ? ಆ ಚೀಟುಗಳನ್ನು ಹಚ್ಚಿ ಆ ಪತ್ರಿಕೆಯವರೆಲ್ಲಾ ಪ್ರಸಿದ್ಧ ಲೇಖಕರಿಗೆ ಲೇಖನಗಳನ್ನು ಬರೆಯಬೇಕೆಂದು ಕಾಗದಗಳನ್ನೂ, ಅವರು ಕಳುಹಿಸದಿದ್ದರೆ ನೆನಪಿನ ಓಲೆಗಳನ್ನೂ ಕಳುಹಿಸುತ್ತಿದ್ದಾರೆ.

* ಂ *

**ಯಸ್. ಆರ್. ಎ., ಪೆರಣಾಲ**

"ನಾನು ಕನ್ನಡದ ಪ್ರಾಚೀನ ಕಾವ್ಯಗಳ ಅಧ್ಯಯನ ಮಾಡಲಿಕ್ಕೆ ತೊಡಗಿದ್ದೇನೆ. ಆದರೆ ಅವುಗಳಲ್ಲಿ ಬರುವ ಎಷ್ಟೋ ಶಬ್ದಗಳು ನನಗೆ ಅರ್ಥವಾಗುವುದಿಲ್ಲ. ಕನ್ನಡಕ್ಕೊಂದು ಯೋಗ್ಯಭಾಷಾಕೋಶವು ಕೂಡ ಇಲ್ಲ. ಸಾಹಿತ್ಯ ಪರಿಷತ್ತಿನವರು ಈ ಕೆಲಸವನ್ನು ಯಾಕೆ ಮಾಡುವುದಿಲ್ಲವೋ ತಿಳಿಯುವುದಿಲ."

ಈಗ ಸಾಹಿತ್ಯ ಪರಿಷತ್ತು ನಿದ್ದೆ ಮಾಡುತ್ತಿದೆಯೆಂಬುದನ್ನು ತಿಳಿಯದ ನಿಮಗೆ ಸಾಹಿತ್ಯಾಧ್ಯಯನದ ಗೊಡವೆಯೇಕೆ? ನಾಡಿದ್ದು ಸಮ್ಮೇಲನದ ಸಮಯಕ್ಕೆ ಅದು ಎಚ್ಚರಗೊಳ್ಳುತ್ತದೆ. ಆಗ ಅದಕ್ಕೆ ನೆನಪುಗೊಡಿರಿ. ಸಾಧ್ಯವಾದರೆ ಅದು ಇನ್ನೊಮ್ಮೆ ನಿದ್ದೆಮಾಡುವ ಮೊದಲು ಈ ಕುರಿತು ಪುನರಾಲೋಚಿಸೀತು. ನಿಮಗಷ್ಟು ಅವಸರವೇನು? ಸಾಹಿತ್ಯ ಪರಿಷತ್ತಿನವರು ಈ ವಿಚಾರದಲ್ಲಿ ಎಷ್ಟೋ ವರುಷಗಳ ಹಿಂದೆಯೇ ಠರಾವನ್ನು ಮಾಡಿದ್ದಾರೆಂಬುದನ್ನು ನೀವು ಓದಿಲ್ಲವೆ?

# ಪತ್ರ ಸಿದ್ಧಿ

ನನ್ನ ಹೆಂಡತಿ ಗರ್ಭಿಣಿಯಾದಳು.... ಮೂರನೇ ಜೀವವೊಂದು ನನ್ನ ಪ್ರಾಣ ಹಿಂಡಲು ಬರುವ ಲಕ್ಷಣವೆಂದು ಭಾವಿಸಿದೆ.. ಈ ಹಾಳು ಸಂಸಾರಕ್ಕೆ ತಿಲಾಂಜಲಿಯಿತ್ತು ಕಾಡು ಸೇರುವುದುತ್ತಮವೆಂದು ನಿರ್ಣಯಿಸಿದೆ....

ಕತೆಗಾರರು:
ಶ್ರೀ. ಎಸ್. ವೆಂಕಟರಾಜರು

●

ಹತ್ತು ವರುಷಗಳ ಹಿಂದಿನ ಮಾತು. ಶ್ರೀನಿವಾಸರಾಯರ ಮನೆಯ ಗುಮಾಸ್ತಿಕೆಯಿಂದಾಗಿ ನನ್ನ ಜೀವನ ನಿರ್ವಾಹವಾಗುತಿತ್ತು. ನನಗೆ ದೊರೆಯುತಿದ್ದ ಸಂಬಳವು ಕಡಿಮೆ. ಆದರೆ ಆಗಿನ ನನ್ನ ಇಚ್ಛಾಶಕ್ತಿಯೂ ಅಷ್ಟೆ; ದೊರೆತುದರಲ್ಲೇ ತೃಪ್ತಿ.

ಮರು ವರುಷ ರಾಯರ ಮಗನ ಮದುವೆ ಜರಗಿತು. ಆ ಸಂಭ್ರಮವನ್ನು ಕಂಡು ನಾನು ಬೆಚ್ಚಿಬಿದ್ದೆ! ಒಂದು ಮದುವೆಗಾಗಿ ಎಷ್ಟು ಖರ್ಚು! ಅಷ್ಟನ್ನು ಸಹಿಸಿದರೂ ಪ್ರತಿ ಮನುಷ್ಯನ ಮದುವೆಯೂ ನಡೆದೇ ತೀರುವುದಂತೆ!–ಎಂದ ಮೇಲೆ ಆ ಮದುವೆಯಲ್ಲಿ ಅದೆಂತಹ ಸುಖವು ಅಡಗಿರುವುದೊ!–ಎಂದು ಕಲ್ಪಿಸತೊಡಗಿದೆ. ಕಲ್ಪನೆಯು ಮುಂಬರಿದಂತೆ ನನಗೂ ಮದುವೆಯ ಹುಚ್ಚು ಹಿಡಿಯಿತು. ಅಂತೂ ಕೊನೆಗೆ ಚೆನ್ನಿಯನ್ನು ಮದುವೆಯಾದೆ.

ಮದುವೆಯಾಗಿ ದಿನಗಳು ಕಳೆದಂತೆ ನನ್ನ ಇಚ್ಛಾಶಕ್ತಿಯ ಪರಿಧಿಯೂ ಬೆಳಯತೊಡಗಿತು. ಅದನ್ನು ಸಹಿಸಲು ನನ್ನ ದುಡಿತವು ಸಾಲದಾಯಿತು. ಆದರೇನು? ಶ್ರೀಮಂತರ ಮನೆಗೆಲಸ; ಕೇಳಿದರಾಯಿತು. ಸಂಬಳ ಹೆಚ್ಚಿಸದಿರುವರೆ? ಮತ್ತೇಕೆ ಅವರಿಗಾ ಶ್ರೀಮಂತಿಕೆ?

ಆದರೆ ಪರಿಸ್ಥಿತಿಯು ಮಾತ್ರ ಅದಕ್ಕೆ ವಿರುದ್ಧವಾಯಿತು. ಬಡವರ ಬಾಳೇ ಶ್ರೀಮಂತರಿಗಾಗಿ–ಎಂದು ಪ್ರಪಂಚವು ಬಗೆದಿದ್ದಾಗ ಶ್ರೀಮಂತರ ಸಂಪತ್ತು ಬಡವರಿಗಾಗಿ–ಎಂದು ಭಾವಿಸಿದುದು ತೀರಾ ನನ್ನ ಹುಚ್ಚುತನ. ಸಂಬಳವನ್ನು ಹೆಚ್ಚಿಸಬೇಕೆಂದು ರಾಯರೊಡನೆ ಕೇಳಿದುದೇನೋ ಸಹಜ. ಆದರೆ ನನ್ನ ಬೇಡಿಕೆಯು ಕೈಗೂಡಲಿಲ್ಲ. 'ಇಷ್ಟವಾದರೆ ಇರು; ಇಲ್ಲವಾದರೆ ನಡೆ' ಎಂದರವರು. ನನ್ನದು ಸ್ವಲ್ಪ ದುಡುಕು ಸ್ವಭಾವ. 'ನನ್ನಂತಹ ಗಂಡಿಗೆ ಹೆಚ್ಚಿಗೆ ದುಡಿಯಲು ಸಾಧ್ಯವಿಲ್ಲವೆ'? ಎಂದು ಭಾವಿಸಿ ಅಲ್ಲಿಂದ ಹೊರಟುಬಿಟ್ಟೆ.

ಹೊರಟದ್ದೇನೋ ಸರಿ. ಆದರೆ ಆದರ ಫಲವನ್ನು ಕೊನೆಯ ತನಕವೂ ಅನುಭವಿಸಬೇಕಾಯಿತು. ಮೈಮುರಿದು ಕೆಲಸ ಮಾಡಿದ ಆಳು ನಾನಲ್ಲ ಎಂದ ಮೇಲೆ ನನ್ನ ಓದುಬರಹವನ್ನು ಕೇಳತಕ್ಕವರಾರು? ಸಾಲದುದಕ್ಕೆ, ಮತ್ತೊಂದು ಜೀವ ನನ್ನ ಬೆನ್ನಹಿಂದೆ. ಎಂತಾದರೂ ಕಷ್ಟಪಟ್ಟು ಒಂದು ಜೀವವನ್ನು ತಣಿಸಿದೆನೆಂದರೆ– ಮತ್ತೊಂದರ ಗತಿ? ಅಯ್ಯೋ! ಆ ಮದುವೆಯ ಹುಚ್ಚು ನನಗೇಕೆ ಹಿಡಿಯಿತೋ!

ಸುಖದ ನಸು ಅಷ್ಟರಲ್ಲೇ ಹರಿದು ದು:ಖದ ಕತ್ತಲೆಯು ಕವಿಯ ತೊಡಗಿತು. ದಾರಿದ್ರ್ಯವು ಹೆಚ್ಚಿದಂತೆ ನನಗೆ ಸಂಸಾರದಲ್ಲಿ ಜುಗುಪ್ಸೆಯು ಹೆಚ್ಚತೊಡಗಿತು. ಅಷ್ಟರಲ್ಲಿ ನನ್ನ ಹೆಂಡತಿಯು ಗರ್ಭಿಣಿಯಾದಳು. ಆದರೆ ನನಗೆ ಒಂದಿಷ್ಟೂ ಸಂತೋಷವಿಲ್ಲ. ಅದನ್ನು ಕಂಡು ಮೂರನೇ ಜೀವವೊಂದು ನನ್ನ ಪ್ರಾಣಹಿಂಡಲು ಬರುವ ಲಕ್ಷಣವಿದೆಂದು ಭಾವಿಸಿದೆ.

ಮನಃಶಾಂತಿಗಾಗಿ ಹಳೆಯ ಸಂಗ್ರಹದ ಒಂದೊಂದೇ ಧಾರ್ಮಿಕ ಗ್ರಂಥಗಳನ್ನು ಓದತೊಡಗಿದೆ. ಓದಿದಂತೆ ಸಂಸಾರವು ಮತ್ತಷ್ಟು ಭಯಂಕರ ಕಂಡಿತು.

ತವರು ಮನೆಯವರು ಆಕೆಯನ್ನು ತಮ್ಮಲ್ಲಿಗೆ ಕರೆದುಕೊಂಡುಹೋದರು. ಆದರೇನು? ಒಂದಿಷ್ಟು ನೆಮ್ಮದಿಯಿಂದಿರಲು ಅವಕಾಶವಿಲ್ಲ. ಚೆನ್ನಿಯು ಹೆತ್ತಳೆಂಬ ವರ್ತಮಾನದೊಂದಿಗೆ—ಜ್ವರದ ಪೀಡೆಯೂ ತೊಡಗಿರುವುದೆಂದು ತಿಳಿದು ಬಂದಿತು. ಸುಖದ ಕಲ್ಪನೆಯಿಂದ ಮದುವೆಯಾಗಿ, ಇನ್ನೇನು ಕಷ್ಟಗಳನ್ನೆಲ್ಲಾ ಕಾಣಲಿರುವೆನೊ—ಎಂದು ಎದೆಯು ನಡುಗತೊಡಗಿತು.

ಚೆನ್ನಿಯ ತವರೂರು ಹಳ್ಳಿಯಾದುದರಿಂದ, ಜ್ವರ ತೊಡಗಿ ಹತ್ತು ದಿವಸಗಳಲ್ಲಿ ಆಕೆಯನ್ನು ನಮ್ಮಲ್ಲಿಗೇ ಕರೆದು ತಂದು ಬಿಟ್ಟರು. ಆದರೆ–ನಾನು ಮಾಡತಕ್ಕದ್ದೇನು? ಕೈಯಲ್ಲಿ ಒಂದು ಕುರುಡು ಕಾಸೂ ಇಲ್ಲ. ಕಾಸಿಲ್ಲದೆ ಪಥ್ಯಪಾನಗಳು ನಡೆಯುವಂತಿಲ್ಲ. ನಡೆಯದಿದ್ದರೆ, ಜೀವವು ಉಳಿಯುವಂತಿಲ್ಲ, ಅಯ್ಯೊ! ಈ ಹಾಳು ಸಂಸಾರವೇ!

ಸಾಂಸಾರಿಕ ವ್ಯಥೆಯಿಂದಾಗಿ ನನ್ನ ಹೃದಯವು

ದುರ್ಬಲವಾಯಿತು. ಸಹನಾಶಕ್ತಿಯು ಲೋಪವಾಯಿತು. ಚಿಕ್ಕ ಚಿಕ್ಕ ಗಂಡಾಂತರಗಳೆಲ್ಲಾ, ದೊಡ್ಡ ದೊಡ್ಡ ಬೆಟ್ಟಗಳಂತೆ ಕಣ್ಣ ಮುಂದೆ ಕಾಣಿಸತೊಡಗಿದುವು. ಹೃದಯಶಾಂತಿಗಾಗಿ, ಪುನಃ ವೇದಾಂತ ಗ್ರಂಥಗಳನ್ನು ಓದತೊಡಗಿದೆ. ಆದರಿಂದಾಗಿ ತಲೆಯು ಮತ್ತಷ್ಟು ಕೆಟ್ಟಿತು. ಈ ಹಾಳು ಸಂಸಾರಕ್ಕೆ ತಿಲಾಂಜಲಿಯನ್ನಿತ್ತು ಕಾಡು ಸೇರುವುದೇ ಉತ್ತಮವೆಂದು ನಿರ್ಣಯಿಸಿದೆ.

ಮರುದಿನ ಮುಂಜಾನೆ-ನನ್ನನ್ನಾರೂ ಅಲ್ಲಿ ಕಾಣಲಿಲ್ಲ!

— ೨ —

ಹಲವು ಊರುಗಳನ್ನು ಸುತ್ತಿದೆ. ಹಲವು ತೀರ್ಥಗಳಲ್ಲಿ ಮುಳುಗಿದೆ. ಕಂಡ ಕಂಡ ದೇವಾಲಯಗಳನ್ನು ಹೊಕ್ಕು ಕೈಮುಗಿದೆರಗಿದೆ. ಆದರೂ ನೆಮ್ಮದಿಯಿಲ್ಲ. ಮತ್ತೂ ಮತ್ತೂ ಮತಿಯಲ್ಲಿ ಮೂಡುವುದೊಂದೆ ಮುಖ! ಆ ಕಳೆಗುಂದಿದ ಮುಖವು ಮುಂದೆ ಬಂದು ಅಡಿಗಡಿಗೆ ನನ್ನ ಹೃದಯವು ನಡುಗುವಂತೆ ತೀವ್ರವಾಗಿ ನೋಡುತ್ತಿದ್ದಿತು. ಆತ್ಮಶಾಂತಿಗಾಗಿ ಗುಹೆಗಳಲ್ಲಿ ಅವಿತು ಕಣ್ಮುಚ್ಚಿ ಕುಳಿತಾಗಲೂ, ಅದೇ ಮುಖವು ನನ್ನ ಬಳಿಗೆ ಬಂದು ದೀನದೃಷ್ಟಿಯಿಂದ ತಿರುಪೆಯನ್ನು ಬೇಡುತಿದ್ದಿತು.

ನಾನು ಯೋಚಿಸತೊಡಗಿದೆ-'ನನ್ನದೇನು ತಪ್ಪು?' ಸಂಸಾರಪಾಶವನ್ನು ಕಡಿದಿಕ್ಕಿ ಹೊರನಡೆದು, ಆತ್ಮೋದ್ಧಾರಕ್ಕಾಗಿ ಹೃದಯವು ಹಂಬಲಿಸಿದರೆ-ಅದೀಗ ತಪ್ಪೆ? ಮೂರು ಗಳಿಗೆಯ ಜೀವಿತದಲ್ಲಿ ಮಾಯಾಪ್ರಪಂಚವನ್ನು ಮರೆತು, ವಿಧಾತನನ್ನು ನೆನೆದರೆ ಅದೀಗ ತಪ್ಪೆ?-'ಉದ್ಧರೇದಾತ್ಮನಾತ್ಮಾನಂ'—! ಮತ್ತೇನು? ಇದೇ ಸರಿಯಾದ ಮಾರ್ಗ! —

ಊರಕಡೆ ಬಂದರೆ ಮತ್ತೆಲ್ಲಿ ಮನಸ್ಸು ವಿಚಲಿತವಾಗುವುದೋ ಎಂಬ ಭೀತಿಯಿಂದ, ದೇಶಾಟನದಲ್ಲೇ ಹಲವು ವರ್ಷಗಳನ್ನು ಕಳೆದೆ. ಕಟ್ಟಕಡೆಗೆ-ಹಳೆಯ ನೆನಹುಗಳು ಒಂದೊಂದಾಗಿ ಮಾಸತೊಡಗಿದುವು. ಜೀವನವು ನೂತನ ಮಾರ್ಗದಲ್ಲಿ ಕಾಲಿಟ್ಟಂತೆ ಭಾಸವಾಯಿತು! ಹಲವು ವರ್ಷಗಳ ಮೇಲೆ, ನನ್ನ ಹೃದಯದ ಹಂಬಲ, ಆ ದೇವದೇವನಿಗೆ ಕೇಳಿಸಿತೋ ಏನೋ! ನನ್ನ ತಪಃಸಿದ್ಧಿಯ ದಿನಗಳು ಕೈಗೂಡಿ ಬಂದುವೋ ಏನೋ!

— ೩ —

ಹತ್ತು ವರ್ಷಗಳ ಮೇಲೆ-ರಾಮೇಶ್ವರ ಯಾತ್ರೆಯನ್ನು ಮುಗಿಸಿ, ಪುನಃ ನಮ್ಮೂರಿಗೆ ಬಂದೆ. ಕಾವಿಬಟ್ಟೆಯ ತೊಡಿಗೆ--ನಿಡಿದಾದ ಗಡ್ಡ--ಎಂದ ಮೇಲೆ ಆಗ ನನ್ನನ್ನಾರೂ ಗುರುತಿಸುವಂತಿರಲ್ಲಿಲ್ಲ. ನಾನೊಬ್ಬ ದಾರಿಹೋಕ ಬೈರಾಗಿ.

ಬಂದು ನೋಡಿದಾಗ, ನಮ್ಮೂರು ತೀರಾ ವ್ಯತ್ಯಾಸಗೊಂಡಿದ್ದಿತು. ಒಂದೊಂದೆ ದೇಹಗಳು ಮಣ್ಣುಗೂಡಿ ಹೊಸ ದೇಹಗಳು ಆವಿರ್ಭವಿಸುವಂತೆ, ಹಳೆಯದರ ತಳಹದಿಯಲ್ಲಿ ಹೊಸ ಕಟ್ಟಡಗಳು ತಲೆಯೆತ್ತಿದ್ದುವು. ಅದನ್ನು ನೋಡಿ -ಭಗವನ್, ಇದೆಲ್ಲಾ ನಿನ್ನ ಲೀಲೆ ಎಂದುಕೊಂಡೆ.

ಮರುದಿನ-ಊರಕೆರೆಯಲ್ಲಿ ಸ್ನಾನವನ್ನು ತೀರಿಸಿ, ಅಲ್ಲೇ ಕುಳಿತಿದ್ದೆ. ಪ್ರಭಾತಕಾಲ-ನಿರ್ಮಲವಾದ ನೀರು, ಪ್ರಶಾಂತ ವಾತಾವರಣ. ಅದರಲ್ಲಿ ಮನಸ್ಸು ಎಲ್ಲೆಯಿಲ್ಲದ ಸುಖವನ್ನು ಅನುಭವಿಸುತಿದ್ದು, ಆತ್ಮವು ಶಾಂತಿಯಲ್ಲಿ ಲೀನವಾಗಿದ್ದಿತು.-'ದೇವಾ! ಎಲ್ಲವೂ ನಿನ್ನ ಕೃಪೆ!'-ಎಂದು ಪರಮಾತ್ಮನ ಪಾದಾರವಿಂದಗಳನ್ನು ನೆನೆದು, ಅಲ್ಲಿ ಗೀತೆಯ ಪಾರಾಯಣವನ್ನು ಮಾಡತೊಡಗಿದೆ. ತೀರದಲ್ಲೇ ಕೆಲವು ಹೆಂಗಸರು ಮೀಯುತ್ತಿದ್ದರು. ನನ್ನ ಕಡೆ ಅವರ ಲಕ್ಷ್ಯವಿದ್ದಿರಲಿಲ್ಲ. ಏನೇನೋ ಸಾಂಸಾರಿಕ ವಿಚಾರಗಳನ್ನು ಕುರಿತು ಚರ್ಚಿಸುತ್ತಿದ್ದರು.

'ನಿನ್ನೆ-ಆ ಬೇಡುವವಳು ಕಳವು ಮಾಡಿದ್ದು ಗೊತ್ತಿದೆಯೇ?'

'ಹೌದಂತೆ; ಕೇಳಿದ್ದೆ. ಪೋಲೀಸಿನವರು ಠಾಣೆಗೆ ಕೊಂಡು ಹೋದರಂತಲ್ಲ?'

'ಹೌದು. ಆದರೆ ಕೊನೆಗೆ ಹುಚ್ಚೀಂತ ಬಿಟ್ಟು ಬಿಟ್ಟರು.

'ನಾನು ಆ ಕೊನೆಯ ಮಾತನ್ನು ಗಮನಿಸಿ, 'ಸಹಜ ಎಲ್ಲರೂ ಹುಚ್ಚರೇ! ಈ ಸಂಸಾರವೆಂಬುದೇ ಒಂದು ಹುಚ್ಚರ ಕೂಟ! ಆದರ ವಿಮೋಚನೆಯೇ ತಪಸ್ಸಿನ ಸಿದ್ಧಿ' ಎಂದು ಭಾವಿಸಿಕೊಂಡೆ.

'ಕಳವು ಮಾಡದೆ ಮತ್ತೇನು ಮಾಡುವುದು? ಪಾಪ! ತವರು ಮನೆಯವರು ತೀರಿ ಹೋದರು. ಗಂಡನ ವರ್ತಮಾನವಂತೂ ಇಲ್ಲವೇ ಯಿಲ್ಲ!'

'ಅವ ಎಲ್ಲೋ ಸನ್ಯಾಸಿ ಆದಾಂತ ಹೇಳ್ತಾರಪ್ಪ!'

'ಗ್ರಹಚಾರ' ತನ್ನ ಹೆಂಡತೀನ ದಾರೀಲಿ ಹಾಕಿ

ಹೋದವ, ಎಂಥ ಸುಟ್ಟಸಂನ್ಯಾಸಿ? ಬೆಂಕಿಹಾಕಿದ್ರು ಅವನ ಸಂನ್ಯಾಸಕ್ಕೆ' ಒಂದು ಜೀವ ನೋಡಿಕೊಂಡು ಇರಲಿಕ್ಕೆ ಕೂಡದಿದ್ದವ, ಮತ್ತೇನು ಉದ್ಧಾರಮಾಡ್ಯಾನು?'-

ಆ ಮಾತು ನನ್ನ ಹೃದಯವನ್ನು ತಿವಿಯತೊಡಗಿತು!

ಮೊಗವೆತ್ತಿ ಕೆರೆಯ ಕಡೆ ನೋಡಿದೆ. ಚಿಕ್ಕ ಮೀನೊಂದು ಮೇಲಕ್ಕೆ ಚಿಗಿದು ಹಾರಿ, ಪುನಃ ಮುಳುಗಿತು. ಆದರೆ- ಅದು ನನ್ನನ್ನು ಕಂಡು ನಕ್ಕು-ಅಯ್ಯೋ! ಸಂನ್ಯಾಸೀ!- ಎಂದು ಹಲ್ಕಿರಿದು ಅಣಕಿಸಿದಂತೆ ನನಗೆ ಭಾಸವಾಯಿತು!

— ೪ —

ಭಿಕ್ಷಾಪಾತ್ರವನ್ನು ಹಿಡಿದು, ತಿರುಪೆಗಾಗಿ ಬೀದಿಯ ಮೇಲೆ ಹೊರಟೆ. ಪಕ್ಕದಲ್ಲಿ ಒಂದು ದೊಡ್ಡ ಮಹಡಿ ಮನೆಯಿದ್ದಿತು. ಆ ಕಡೆ ತಿರುಗಿದೆ. ಗೇಟಿನ ಬಳಿ ಕಾಲಿಟ್ಟಾಗ ಹರಕು ಬಟ್ಟೆಯ ಭಿಕ್ಷುಕಿಯೊಬ್ಬಳು ಇದಿರು ಬಂದಳು. ಕಂದಿದ ದೇಹ-ಕುಂದಿದ ಮೈಬಣ್ಣ! ಅವಳನ್ನು ಕಂಡೊಡನೆ-ಮರವೆಯ ಮುಗಿಲೊಂದು ಮಾಸಿ, ಹಳೆಯ ನೆನಹಿನ ಕಿಡಿಯೊಂದು ಹೃದಯವನ್ನು ಹೊಕ್ಕು ಸುಟ್ಟಂತಾಯಿತು! ಮೌನವಾಗಿ ನಿಂತು ಒಂದು ಕ್ಷಣ ಅವಳನ್ನೇ ನೋಡಿದೆ. ದೃಷ್ಟಿ ಕೂಡಿತು-ಎದೆ ನಡುಗಿತು!

ಮನೆಯ ನಾಯಿಯು ನನ್ನನ್ನು ಕಂಡು, ಒಂದೇ ಸವನೆ ಬೊಗಳತೊಡಗಿತು. ಆದರೆ-ಅದು ಅಯ್ಯೋ ನಿನ್ನ ಹಾಳಾದ ತಪಃಸಿದ್ಧಿಯೆ!-ಎಂದು ನನ್ನನ್ನು ಜರೆದಂತೆಯೇ ಕಾತರಿಸುವ ಹೃದಯಕ್ಕೆ ಅನುಭವವಾಯಿತು!

---

# ವಿನೋದಮಯ ರಾಜತಂತ್ರ

ಬರೆದವ:- "ಚಾಣಕ್ಯ".

## ಬಿಳುಪಿಗಾಗಿ ಬೆಲೆಯೆ?

ಹೈದರಾಬಾದ್ ನಿಜಾಮರ ಸರಕಾರವು ಎಲ್ಲಾ ಧಾರ್ಮಿಕ ಹಾಗೂ ಧರ್ಮಸಂಸ್ಥೆಗಳನ್ನು ಸಮಾನ ದೃಷ್ಟಿಯಿಂದ ಕಂಡು ಅವಶ್ಯವಿದ್ದಲ್ಲೆಲ್ಲಾ ಬೆಂಬಲವನ್ನೀಯುವುದೆಂಬ ಪ್ರಕಟಣೆಯನ್ನು ಹೊರಡಿಸಿದೆ. ಆದರೆ ಈ ಪ್ರಕಟನೆಯಲ್ಲೊಂದು ಕುಂಟು ಪಂಗ್ತಿಯಿದೆ. ಅದಾವುದೆಂದರೆ ಮೇಲಿನ ಯಾವ ಸಂಸ್ಥೆಯೂ ರಾಜಕಾರಣದಲ್ಲಿ ಭಾಗವಹಿಸಬಾರದೆಂಬುದು. ಸರಿ. ಧಾರ್ಮಿಕ ಸಂಸ್ಥೆಗಳು ರಾಜಕೀಯದಲ್ಲಿ ಕೈಹಾಕಿದೊಡನೆಯೇ ವಿಚಿತ್ರ ಉತ್ಪಾತಗಳಾಗುವುದುಂಟು. ಆದರೆ ಘಟನಾತ್ಮಕ ಚಟುವಟಿಕೆಗಳಲ್ಲಿ ಈ ಸಂಸ್ಥೆಗಳು ಭಾಗವಹಿಸಬಾರದೇಕೆಂಬುದು ಒಂದು ಪ್ರಶ್ನೆಯಾಗಿರುವುದಿದ್ದರೂ, ಅದಕ್ಕೆ ಸರಕಾರವು ಉತ್ತರವೀಯಲಿಲ್ಲ. ಈ ಮೇಲಿನ ಪ್ರಕಟನೆಗೆ ಮೂಲ ಕಾರಣವಾವುದೆಂದರೆ ಅಲ್ಲಿಯ ಯುರೋಪಿಯನ್ ಸಂಘಕ್ಕೆ ಸೇರಲು ಸರಕಾರದ ಸೇವಕರಿಗೆ ಅಪ್ಪಣೆಯನ್ನು ಕೊಡಬೇಕೆಂಬ ಬೇಡಿಕೆಯಿಂದಾಗಿ. ಈ ಬೇಡಿಕೆಯನ್ನು ಸರಕಾರವು ಮನ್ನಿಸಲಿಲ್ಲ. ಕಾರಣ. ಸಂಸ್ಥಾನಗಳ ಜನರು ಈಗಾಗಲೇ ಎಚ್ಚತ್ತಿದ್ದಾರೆ. ಬಿಳಿ ಜನರ ಬೇಡಿಕೆಯನ್ನು ಪಾಲಿಸಿದರೆ ಸಂಸ್ಥಾನಿಕರು ಅದೇ ಸವಲತ್ತನ್ನು ಕೇಳುವರೆಂದು ತಿಳಿದು ಅಲ್ಲಿಯ ಸರಕಾರದವರು ಕೊಡುಗೈಯನ್ನು ಹಿಂತೆಗೆದಿರಬಹುದು. ಕೊಡುಗೈಯನ್ನು ಒಂದು ಪಕ್ಷದವರಿಗೆ ಮಾತ್ರ ನೀಡಿದರೆ ನ್ಯಾಯವ್ಯಭಿಚಾರ ಮಾಡಿದಂತಾಗುವುದು ಖಂಡಿತ. ಅಲ್ಲಿಯ ಯುರೋಪಿಯನರಿಗೆ ಇದರಿಂದ ಸಮಾಧಾನವಾಗಲಿಲ್ಲವಂತೆ. ಅವರು ಬಿಳಿ ಜನರೆಂದು ಸರಕಾರವು ಬೆಲೆ ಕೊಡಬೇಕಿತ್ತೆ?

●

## ಗುಡ್ಡಕ್ಕೆ ಮಣ್ಣು ಹೊತ್ತರು!

ಪ್ರಾಂತಿಕ ಸ್ವಾಯತ್ತೆಯ ಪ್ರಕಾರ ವಿದ್ಯೆಯು ಪ್ರಾಂತಿಕ ಸರಕಾರದ ಅಧಿಕಾರವಾಗಿದ್ದರೂ ಕೇಂದ್ರ ಸರಕಾರವು ಅಧಿಕಾರಿಗಳನ್ನು ನೇಮಿಸುವ ಅಭ್ಯಾಸವನ್ನು ಮಾತ್ರ ನಿಲ್ಲಿಸಲಿಲ್ಲ. ಕೇಂದ್ರ ಸರಕಾರವು ಡಿಲ್ಲಿಯ ಸುತ್ತುಮುತ್ತಲಿನ ಕೆಲವು ಶಾಲೆಗಳ ಆಡಳಿತವನ್ನು ನೋಡುವುದಿದ್ದರೂ, ಪ್ರಾಂತಿಕ ವಿದ್ಯಾ ಧೋರಣೆಯ ಮೇಲ್ವಿಚಾರ ನಡೆಸಲು ಒಬ್ಬ "ವಿದ್ಯಾ ಕಮಿಷನರ"ರನ್ನು ನೇಮಿಸುವ ಹಠತೊಟ್ಟು, ಜನಾಭಿಪ್ರಾಯವು ಅದಕ್ಕೆ ವಿರೋಧವನ್ನು ಸೂಚಿಸಿದರೂ, ಸಾಧಿಸಿಯೇ ಬಿಟ್ಟಿದ್ದಾರೆ. ಈ ಸ್ಥಾನವು ಬಡ ಜನರ ತೆರಿಗೆಯ ನಷ್ಟಕ್ಕಾಗಿರುವುದಲ್ಲದೆ ಇದರಿಂದ ಬೇರಾವ ಫಲವೂ ಭಾರತೀಯರಿಗೆ ಸಿಗುವಂತಿಲ್ಲ. ಡಿಲ್ಲಿಯ ಶಾಲೆಗಳ ವಿಚಾರಣೆ ನಡೆಸಲು ಒಬ್ಬ ಶಾಲಾ ಇನ್ಸ್‌ಪೆಕ್ಟರರಿದ್ದರೆ ಸಾಕಿತ್ತು. ಆದರೆ ನಮ್ಮ ದಯಾಳು ಸರಕಾರದ ಅತ್ಯಂತ ಸನ್ಮಾನ್ಯ ವೈಸರಾಯ ಪ್ರಭುಗಳು, ಆ ಸ್ಥಾನಕ್ಕೆ (ಒಬ್ಬ ಭಾರತೀಯನಿಗಾಗಿ ಬಹುವಾಗಿ ಹುಡುಕಿ, ಬಳಲಿ ನಿರಾಶರಾಗಿ) ಇಂಗ್ಲೆಂಡಿನ ಮೂಲೆಯಲ್ಲಿರುವ ಎಸೆಕ್ಸ್ ಎಂಬಲ್ಲಿಯ ವಿದ್ಯಾ ಡೈರೆಕ್ಟರರೊಬ್ಬರನ್ನು ನೇಮಿಸಿ ಬಿಟ್ಟಿದ್ದಾರೆ. ಈ ಮಹಾನುಭಾವರಿಗೆ ಭಾರತೀಯ ವಾತಾವರಣ, ಇಲ್ಲಿಯ ಮಕ್ಕಳ ಮನಃಭಾವ, ಸಾಮಾಜಿಕ ಪರಿಸ್ಥಿತಿ, ಇವೇ ಮೊದಲಾದವುಗಳ ಗಂಧಗಾಳಿಯೂ ಇಲ್ಲ. ವಾರ್ಧಾಯೋಜನೆಯು ಜಾರಿಗೆ ಬರುವುದರಿಂದ ಈ ವ್ಯಕ್ತಿ ಅತ್ಯವಶ್ಯವೆಂದು ಕೇಂದ್ರ ಸರಕಾರದ ಇನ್ನೊಂದು ಪ್ರಕಟನೆಯು ಹೇಳಿದೆ. ಹೊಸ ಸ್ಥಾನವು ಖಾಲಿಬಿದ್ದರೆ ಅದನ್ನು ತುಂಬಲು ಭಾರತದಲ್ಲಿರುವ ಅನೇಕ ಸುಶಿಕ್ಷಿತ ನಿರುದ್ಯೋಗಿಗಳಲ್ಲಿ ಒಬ್ಬನೂ ನಮ್ಮ ಸರಕಾರದವರಿಗೆ ಕಾಣಿಸುವುದಿಲ್ಲ. ಅಂತಹ ಸ್ಥಾನಗಳ ಅಧಿಕಾರ ವಹಿಸುವ ಗುಣಗಳು ಇಂಗ್ಲೆಂಡಿನ ಜನರಲ್ಲಲ್ಲದೆ ಇನ್ನಾರಲ್ಲೂ ಇರುವುದಿಲ್ಲ. ಭಾರತೀಯ ವಿದ್ಯಾಭ್ಯಾಸಕ್ಕೂ, ನೈಜ ಜೀವನಕ್ಕೂ ಈಗಿರುವ ಸಂಬಂಧವೆಂದರೆ ಎಣ್ಣೆಗೂ ಸೀಗೆಗೂ ಇರುವಂಥದ್ದೆಂಬ ದೂರು ಹೆಚ್ಚುತ್ತಿರುವಾಗ ಅದನ್ನು ಸುಧಾರಿಸುವ ಕಾರ್ಯವನ್ನು ಇಲ್ಲಿಯ ಪರಿಸ್ಥಿತಿಯನ್ನೇ ಅರಿಯದ "ಬಿಳಿ ಧೊರ"ಗಳು ಮಾಡುವುದಾದರೂ ಹೇಗೆ? ಇವರನ್ನು ಭಾರತಕ್ಕೆ ತರುವುದೆಂದರೆ ಗುಡ್ಡಕ್ಕೆ ಮಣ್ಣು ಹೊತ್ತಂತಲ್ಲವೆ? ಇದರಿಂದ ಭಾರತೀಯರ ಬುದ್ಧಿಶಕ್ತಿಯನ್ನು ಹೀನೈಸಿದಂತಾಗುತ್ತದೆ.

●

## ಏಕ ಪತ್ನೀ ಮಸೂದೆ

ಶ್ರೀಮತಿ ರಾಧಾಬಾಯಿ ಸುಬ್ಬರಾಯನವು ಏಕಪತ್ನೀ ಮಸೂದೆಯ ನೋಟೀಸನ್ನು ಕೇಂದ್ರ ಶಾಸನ ಸಭೆಗೆ ಕೊಟ್ಟಿರುವುದು ಶ್ಲಾಘನೀಯವಾಗಿದೆಯೆಂದು ಏಕಪತ್ನೀ ಪದ್ಧತಿಯನ್ನು ಮೆಚ್ಚುವವರೆಲ್ಲರೂ ಒಪ್ಪಿಕೊಳ್ಳಬೇಕಾಗಿದೆ. ಅನೇಕ ಹಿಂದು ಗಂಡಂದಿರು (ಮುಸ್ಲಿಮರಲ್ಲಿ ಇದೇನು ಕಡಿಮೆಯಾಗಿಲ್ಲ!) ಶುಷ್ಕ ಕಾರಣದಿಂದಾಗಿ ತಮ್ಮ ಮಡದಿಯರನ್ನು ನಿಷ್ಕರುಣೆಯಿಂದ ಬಿಟ್ಟು ಅವರ ಸಮಗ್ರ ಜೀವನವನ್ನೇ ಕೆಡಿಸಿ ಬಿಡುತ್ತಾರೆ. ಸೀತಾ, ಸಾವಿತ್ರಿ ದಮಯಂತಿಯರ ಆದರ್ಶ ಪತ್ನಿತ್ವವಲ್ಲದೆ ಇನ್ನಾವುದನ್ನೂ ಅರಿಯದ ಈ ನಿರ್ಭಾಗ್ಯ ಲಲನೆಯರ ಅವಸ್ಥೆಯು ಮತ್ತಷ್ಟು ಕಠಿನವಾಗುತ್ತದೆ. ಬೇಡವಾಗಿದ್ದಲ್ಲಿ ಗಂಡಂದಿರಿಂದ ದೂರವಾಗುವ ಒಂದು ಮಸೂದೆಯಿಲ್ಲದೆ ಅದೆಷ್ಟೋ ಮಂದಿ ಕುಲೀನ ಸ್ತ್ರೀಯರು ಸಮಾಜದ ಪದ್ಧತಿಯನ್ನು ಧಿಕ್ಕರಿಸಿ ಅಪಖ್ಯಾತಿಗೆ ಕಾರಣವಾದ ದಾರಿಯಲ್ಲಿ ಕಾಲಿಡಬೇಕಾಗುತ್ತದೆ. ಪುರುಷರು ತಮ್ಮ ಕಾಮತೃಷೆಯನ್ನು ಪೂರೈಸುವಷ್ಟು ಅಭಿರುಚಿಯನ್ನು ಅವರಲ್ಲಿ ತೋರಿಸಿ, ಇತರ ಕಾಲಗಳಲ್ಲಿ ಪ್ರಾಣಿಗಳಿಗಿಂತಲೂ ಹೀನವಾಗಿ ಕಾಣುವುದರಿಂದ ಮತ್ತು ಹೆಚ್ಚಿನ "ಅತ್ತೆದೆವ್ವದ" 'ಕಾರಣಿಕ'ಕ್ಕೆ ತರುಣಿಯರು ಒಳಗಾಗುವುದರಿಂದ ಅವರ ಪರಿಸ್ಥಿತಿಯು ಶೋಚನೀಯವಾಗುತ್ತದೆ. ಆದುದರಿಂದ ಈ ಮಸೂದೆಗೆ ಬೆಂಬಲವೀಯಬೇಕೆಂದು ಬಹು ಪತ್ನೀ ಪದ್ಧತಿಯ ಸಮರ್ಥಕರು ಕೂಡಾ, ಅಸಹಾಯ ಲಲನೆಯರ ಅವಸ್ಥೆಯನ್ನು ಕಂಡು ಹೇಳದಿರಲಾರರು.

●

## ಸುಳ್ಳುಮಸೂದೆ!

ಅಸಹಕಾರ ಚಳವಳದ ಕಾಲದಲ್ಲಿ ಭೂಮಿಗಳನ್ನು ಕಳೆದುಕೊಂಡ ನಿರ್ಭಾಗ್ಯ ರಾಷ್ಟ್ರಪ್ರೇಮಿಗಳ ಭೂಮಿಯನ್ನು ಈಗಿನ ಒಡೆಯರಿಂದ ಬಲಾತ್ಕಾರವಾಗಿ ತಗೆದುಕೊಳ್ಳುವ ಮಸೂದೆಯೊಂದನ್ನು ಮುಂಬಯಿ ಸರಕಾರದವರು ಮಾಡಲಿದ್ದಾರೆಂಬ ವಾರ್ತೆಯೊಂದು ಪ್ರತಿಯೊಂದು ಪತ್ರಿಕೆಯ ಪುಟಗಳೊಳಗೆ ಹೊಕ್ಕಿಬಿಟ್ಟಿತು. ಆದರೆ— ವಿಚಾರಣೆಯಾದ ಬಳಿಕ ಅದೇ ಸುಳ್ಳು ಹೊರಗೆ ಬರಲೇ ಬೇಕಾಯಿತು. ನ್ಯಾಯವಾಗಲಿ, ಅನ್ಯಾಯವಾಗಲಿ, ಅವುಗಳ ಈಗಿನ ಒಡೆಯರೇ ನ್ಯಾಯಬದ್ಧರಾದ ಒಡೆಯರು. ಅವರಿಂದ ಭೂಮಿಗಳನ್ನು ಈಗಿನ ಸರಕಾರವು ತೆಗೆದುಕೊಂಡರೆ ಇನ್ನು ಮುಂದೆ ಬರಬಹುದಾದ ಸರಕಾರವು (ಕಾಂಗ್ರೆಸಲ್ಲದೆ ಬೇರಾವುದೂ ಬರದಿರದಿರಲೆಂದು ನಮ್ಮ ಪ್ರಾರ್ಥನೆ) ಪುನಃ ಅದನ್ನು ಹಿಂದೆ ತಗೆದುಕೊಳ್ಳುವ ಮಸೂದೆ ಮಾಡಿ ಈಗಿನ ಒಡೆಯರಿಗೆ ಕೊಡುವಂತಾದರೆ "ಪುನರಪಿ ಜನನಂ, ಪುನರಪಿ ಮರಣಂ" ಎಂಬ ತತ್ವದಂತಾಗಲಿಕ್ಕಿಲ್ಲವೇ ಈ ಭೂಮಿಗಳ ಒಡೆತನದ ಪಾಡು? ಆದುದರಿಂದ ಈ ಮಸೂದೆಯ ಸುದ್ದಿಯು ಪ್ರಾಯಶಃ ಅಮೇರಿಕದಿಂದ ಹೊರಟಿರಬೇಕು.



ಬ್ರಿಟನಿನ ಪ್ರಧಾನ ಸಚಿವರಾದ
**ಚೇಂಬರ್ಲೇನರು**

●

## ಬ್ರಿಟಿಷರು ಭಾರತವನ್ನು ಗೆದ್ದು ಆಳಿದರೇ?

ಪ್ರೊ. ಫಿಷರ್ ಎಂಬವರು ಬರೆದ "ಯುರೋಪು ಚರಿತ್ರೆ"ಯಲ್ಲಿ "ಭಾರತಕ್ಕೆ ಶಾಂತಿಯನ್ನೂ, ದಬ್ಬಾಳಿಕೆಯಿಂದ ರಕ್ಷಣೆಯನ್ನೂ ಕೊಟ್ಟದ್ದರಿಂದ ಬ್ರಿಟಿಷರು ಭಾರತವನ್ನು ಜಯಿಸಿದರು" ಎಂದು ಬರೆದಿದೆ. ಇದನ್ನು ವಿಮರ್ಶಿಸುತ್ತ ಕಾಂಗ್ರೆಸಿನ ಪ್ರಚಾರಾಧಿಕಾರಿಗಳಾದ ಡಾ| ರಾಮಮನೋಹರ ಲೋಹಿಯರವರು 'ಬ್ರಿಟಿಷರು ಭಾರತವನ್ನು ಗೆದ್ದರು' ಎಂಬುದನ್ನೊಪ್ಪಿಕೊಂಡು "ಶಾಂತಿ ರಕ್ಷಣೆಗಳನ್ನು ಕೊಟ್ಟರು" ಎಂಬುದನ್ನು ಅಲ್ಲಗಳೆದಿದ್ದಾರೆ. ಬ್ರಿಟಿಷರು ಭಾರತವನ್ನು ಜಯಿಸಲೇ ಇಲ್ಲ. "ಇಂಗ್ಲೆಂಡಿನ ವಿಕಾಸ"ವೆಂಬ ಪುಸ್ತಕದಲ್ಲಿ ಸೀಲೆ ಎಂಬ ಚರಿತ್ರೆಗಾರರು ಅನ್ನುವಂತೆ "ನಾವು ಭಾರತವನ್ನು ಗೆಲ್ಲಲಿಲ್ಲ. ಗೆದ್ದವರಂತೆ ನಾವು ಭಾರತವನ್ನಾಳಲಾರೆವು" ಅವರು ಭಾರತವನ್ನು ಗೆಲ್ಲಲಿಲ್ಲ. ಭಾರತೀಯರೇ ತಮ್ಮ ಜನ್ಮಭೂಮಿಯನ್ನು ಬ್ರಿಟಿಷರ ಕೈಗೆ ದಬ್ಬಿದರು ಇದನ್ನು ಜಯಿಸಲಿಕ್ಕಾಗಿ ಬ್ರಿಟಿಷರು ಚಿಕ್ಕಾಸನ್ನಾದರೂ ವ್ಯಯಮಾಡಲಿಲ್ಲ. ನಮ್ಮ ಹಣದಿಂದಲೇ ನಮಗೆ ಮೋಸ ಕೊಟ್ಟಿದ್ದಾರೆ. ನಾವು ಕೊಟ್ಟಿರುವಂತೆಯೇ ಭಾರತವನ್ನು ಹಿಂತೆಗೆದುಕೊಳ್ಳಬೇಕು. ಇದಕ್ಕೆ ಯೋಗ್ಯವಾದ ವಿಧಾನವು ಅಹಿಂಸೆಯೇ ಅಥವಾ ಸಮತಾವಾದವೇ?

●

## ನಾಹಸ್ ಪಾಶರು ಭಾರತಕ್ಕೆ ಬರುವರೇ?

ಈಜಿಪ್ಟಿನ ಮಾಜಿ ಪ್ರಧಾನ ಮಂತ್ರಿಗಳೂ ವಫ್ದ್ ಪಕ್ಷದ ಧುರೀಣರೂ ಆದ ನಾಹಸ್ ಪಾಶರು ಮುಂದಿನ ಕಾಂಗ್ರೆಸಿಗೆ ಬರುವರೆಂಬ ಆಶ್ವಾಸನೆಯನ್ನು ಪಂಡಿತ ನೆಹರುಗಳಿಗಿತ್ತಿದ್ದರೆಂದು ವಾರ್ತೆ. ನಾಹಸ್ ಪಾಶರು ಬರುವುದು ಖಂಡಿತವೆಂದಾದರೆ ಮುಸ್ಲಿಂ ಲೀಗಿನವರು ತಮ್ಮ ವಾರ್ಷಿಕಾಧಿವೇಶನಕ್ಕೆ ಪ್ರಾಯಶಃ ನಾಹಸ್ ಪಾಶರಿಗಿಂತಲೂ ದೊಡ್ಡ ವ್ಯಕ್ತಿಯನ್ನು ತರಿಸುವಯತ್ನಕ್ಕೆ ಕೈ ಹಾಕಬಹುದು! ಅಂತರ್‌ರಾಷ್ಟ್ರೀಯ ಸಂಬಂಧವು ಅವಶ್ಯವಿದ್ದರೂ ಹೊರಗಿನವರಿಗೆ ನಮ್ಮೊಳಗಿನ ಗುಟ್ಟನ್ನು ತಿಳಿಸುವುದು ಯೋಗ್ಯವೇ ಎಂಬುದನ್ನು ಇತ್ತಂಡದವರು ಯೋಚಿಸದಿದ್ದರೂ ಮೂರನೆಯವರು ಯೋಚಿಸುತ್ತಿದ್ದಾರೆ.

●

## ಅವರಾಗಕೂಡದು— ಇವರಾಗಬಹುದೆ?

ಒರಿಸ್ಸದ ಬಿಕ್ಕಟ್ಟಿನ ವಿಷಯವು ಮರೆ

ತು ಹೋಗಿರಬಹುದು. ಆದರೆ ಅದನ್ನು ನೆನಪಿಗೆ ತಂದೊಡನೆಯೇ ಸ್ವಾರಸ್ಯದ ನಗುವೊಂದು ಬಂದೇಬಿಡುತ್ತದೆ. ಸರ್ ಜೋನ್ ಹಬಕ್ಕರು ರಜೆಯಲ್ಲಿ ಹೋಗುವವರಿದ್ದರು. ಒರಿಸ್ಸದ ಚೀಫ್ ಸೆಕ್ರೆಟರಿಯಾದ ಮಿ। ಡೇನರು ಬದಲಿ ಗವರ್ನರರಾಗುವುದೆಂದಾಯಿತು. ಈ ಸುದ್ದಿ ಕೇಳಿದೊಡನೆ ಉತ್ಪಾತವಾಯಿತು. ಬಿಕ್ಕಟ್ಟಿನ ಸುಂಟರಗಾಳಿಯು ಬೀಸಿತು. ಲಂಡನ್ ತಲೆ ಬಗ್ಗಿಸಿತು. ಕಾಂಗ್ರೆಸ್ ಗೆದ್ದಿತು! ಆದರೆ ಮತ್ತೇನಾಯಿತೆಂಬಿರಾ! ಅದೇ ಹಾಡನ್ನು ಸ್ವಲ್ಪ ಸಮಯದ ಬಳಿಕ ಬ್ರಿಟಿಷ್ ಸರಕಾರವು ಹಾಡಿತು. ಒರಿಸ್ಸದ ಚೀಫ್ ಸೆಕ್ರೆಟರಿಯರ ಬದಲು ಅವರಂತೆಯೇ ಇದ್ದ ಮದ್ರಾಸಿನ ಚೀಫ್ ಸೆಕ್ರೆಟರಿಯರಾಗಿದ್ದ ಮಿ। ಜ. ಟ. ಬೋಗರು ಒರಿಸ್ಸದ ಬದಲಿ ಗವರ್ನರರಾದರು. ಈ ಕುರಿತು ಈಗ ಯಾರೂ ವಿಮರ್ಶಿಸುವುದಿಲ್ಲ, ಮರುಗುವುದಿಲ್ಲ. ಡೇನ್- ಬೋಗರೊಳಗಿನ ಏಕಮಾತ್ರ ವ್ಯತ್ಯಾಸವೆಂದರೆ ಡೇನರು ಒರಿಸ್ಸದ ಮಂತ್ರಿಗಳಧೀನ ಕೆಲಸಮಾಡಿದ್ದರು. ಆದರೆ ಬೋಗರು ಅವರಧೀನ ಕೆಲಸಮಾಡದೆ ಮದ್ರಾಸ್ ಸರಕಾರದಧೀನ ದುಡಿದವರು. ಇದರಿಂದ ಸರಕಾರಕ್ಕೆ ಸಿಕ್ಕಿದ ಏಕಮಾತ್ರ ಲಾಭವೆಂದರೆ ಬೋಗರು ಹೊಸಬರಾದುದರಿಂದ ಒರಿಸ್ಸದ ಪರಿಸ್ಥಿತಿಯ ಅನನುಭವ. ಇದರ ಪರಿಣಾಮದಿಂದಾಗಿ ಆಗುವದು ಕೆಲವು ಅಸಂಬದ್ಧ ಕೆಲಸಗಳಲ್ಲದೆ ಮತ್ತಾವುದೂ ಇಲ್ಲ. ಈ ತರದ ಗೌರವದ ಲಾಭವು ಬೇಕಾಗಿದೆಯೇ ಎಂಬುದು ದೀರ್ಘದೃಷ್ಟಿಯವರ ಪ್ರಶ್ನೆಯಾಗಿರಲಾರದೆ?

●

## ಸುಭಾಷರ ಸ್ಪಷ್ಟೋಕ್ತಿ

ರಾಷ್ಟ್ರಪತಿ ಸುಭಾಷ ಬೋಸರು ಗವರ್ನರರ ಸ್ಥಾನಗಳಿಗೆ ಭಾರತೀಯರನ್ನು ನೇಮಿಸುವ ಅವಶ್ಯಕತೆಯ ಕುರಿತು ಕೊಟ್ಟ ಹೇಳಿಕೆಯು ಗಣನೀಯವಾಗಿದೆ. ಇತ್ತೀಚೆಗೆ ಸುಮಾರು ಗವರ್ನರರು ರಜೆಯಮೇಲೆ ಇಂಗ್ಲೆಂಡಿಗೆ ತೆರಳಿದರು. ಇವರ ಸ್ಥಾನವನ್ನು ಯೋಗ್ಯವಾಗಿ ತುಂಬಲು ಬೇಕಾದಷ್ಟು ಭಾರತೀಯರಿದ್ದರೂ, ವಿವಿಧ ಪ್ರಾಂತ್ಯಗಳ ಸರಕಾರದ ಮುಖ್ಯ ಕಾರ್ಯದರ್ಶಿಗಳ ಸ್ಥಾನದಲ್ಲಿದ್ದ ಯುರೋಪಿಯನರನ್ನು ನೇಮಿಸಿರುವುದನ್ನು ನೋಡುವಾಗ ಪ್ರಾಂತಿಕ ಸ್ವಾಯತ್ತೆಯು ಜ್ಯಾರಿಗೆ ಬಂದರೂ ಹಿಂದಿನ ದ್ವಿದಳ ರಾಜ್ಯ ಪದ್ಧತಿಗಿಂತ ಇದು ನಿಕೃಷ್ಟವಾದುದೆಂಬ ಭಾವನೆಯುಂಟಾಗುತ್ತದೆ. ಈ ತರದ ಸವಲತ್ತುಗಳನ್ನು ಭಾರತೀಯರಿಗೆ ಅಲ್ಲಗಳೆದು ಬ್ರಿಟಿಷರಿಗೆ ಕೊಡುವುದೆಂದರೆ ಅಕ್ಷಮ್ಯ ಅಪರಾಧವೇ ಸರಿ. ಸುಭಾಷರಂದಿರುವಂತೆ ಐರ್ಲೆಂಡಿನ ಪದ್ಧತಿಯ ಪ್ರಕಾರ ಮಂತ್ರಿಗಳೇ ಗವರ್ನರರನ್ನು ಶಿಫಾರಸು ಮಾಡುವಂತಾದರೆ ಈ ಹೇಯ ಪದ್ಧತಿಯು ಒಮ್ಮೆಗೇ ನಿಂತು ಬಿಡಬಹುದು. ಇಷ್ಟಲ್ಲದೆ ಒಂದು ಪ್ರಾಂತ್ಯದ ಸರಕಾರದಧೀನ ಕೆಲಸ ಮಾಡಿದವರನ್ನು ಇನ್ನೊಂದು ಪ್ರಾಂತ್ಯದ ಗವರ್ನರರನ್ನಾಗಿ ನೇಮಿಸುವ ಕುರಿತು ತನ್ನ ನಿಷೇಧವನ್ನು ಸೂಚಿಸಿರುವುದು ಸಂತೋಷದ ಸಂಗತಿಯಾಗಿದೆ. ಆದರೆ ಕೇಂದ್ರ ಸರಕಾರವು ಗವರ್ನರರ ನೇಮಕದ ಕುರಿತು ತನ್ನ ಧೋರಣೆಯನ್ನು ಸ್ಪಷ್ಟಗೊಳಿಸುವ ಕಾಲವು ಬೇಗನೇ ಬಂದು ಬಿಡಬಹುದೆ?

●

## ಸಮತಾವಾದಿಗಳ ಶಿಸ್ತು.

ಶ್ರೀ. ಸತ್ಯಮೂರ್ತಿಯವರು ಸುಭಾಷರು ಸಂಯುಕ್ತ ಘಟನೆಯ ಕುರಿತು ಕೊಟ್ಟ ಹೇಳಿಕೆಯನ್ನು ಖಂಡಿಸಿದ್ದಕ್ಕಾಗಿ ಅವರ ಮೇಲೆ ಶಿಸ್ತನ್ನು ಜ್ಯಾರಿ ಮಾಡಬೇಕೆಂದು ಬಂಗಾಳದ ಸಮತಾವಾದಿ ಪಕ್ಷದವರು ಒಂದು ನಿರ್ಣಯ ಮಾಡಿದ್ದಾರೆ. ಅಖಿಲ ಭಾರತವು ಸಂಯುಕ್ತ ಭಾರತವಾಗಬೇಕೆಂಬ ವಿಚಾರವನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ಬ್ರಿಟಿಷರು ನಮಗೆ ತಯಾರಿಸಿ ಕೊಟ್ಟ ಸಂಯುಕ್ತ ಘಟನೆಯು ಮಾತ್ರ ಬೇಡವೆಂದು ನಮ್ಮ ವಾದ. ಸತ್ಯಮೂರ್ತಿಯವರು ಹಲಕೆಲವು ಬದಲಾವಣೆಗಳೊಂದಿಗೆ ಫೆಡರೇಶನನ್ನು ಸ್ವೀಕರಿಸಲು ಸಿದ್ಧರಾಗಿದ್ದಾರೆ. ತನ್ನ ಅಭಿಪ್ರಾಯವನ್ನು ಹೊರಗೆಡಹಿರುವುದಕ್ಕಾಗಿ ಅವರ ಮೇಲೆ ಶಿಸ್ತು ಜಾರಿ ಮಾಡುವುದೆ? ಇದಕ್ಕನ್ನುತ್ತಾರೆ 'ಸಮತಾವಾದಿ ಶಿಸ್ತು' ಎಂದು.

●

## ಸರ್ವಾಧಿಕಾರಿಗಳಿದ್ದರೆ ಶಾಂತಿಯಿಲ್ಲ.

'ಸರ್ವಾಧಿಕಾರಿಗಳು ಯುದ್ಧದಿಂದಾಗಿ ಹುಟ್ಟುತ್ತಾರೆ, ಯುದ್ಧದಿಂದ ಬೆಳೆಯುತ್ತಾರೆ, ಮತ್ತು ಯುದ್ಧದಿಂದಲೇ ತಮ್ಮ ಧ್ಯೇಯಗಳನ್ನು ಸಾಧಿಸಲೆತ್ನಿಸುತ್ತಾರೆ. ಫೇಸಿಸಮಿಗೂ ಕಮ್ಯೂನಿಸಮಿಗೂ ವ್ಯತ್ಯಾಸವಿಲ್ಲ. ಎರಡು ತತ್ವಗಳೂ ಕ್ರಾಂತಿಯಿಂದಲೇ ಕಾರ್ಯ ಸಾಧಿಸುವಂಥವುಗಳು. ಈಗ ಯುದ್ಧವಲ್ಲದೆ ಶಾಂತಿಯಿಲ್ಲ, ಸುಖವಿಲ್ಲ. ಜನರು ಶಾಂತಿ ಮತ್ತು ಆಹಾರ ಕೇಳಿದರೆ ಕೋವಿ ಮತ್ತು ದಾರಿದ್ರ್ಯವನ್ನು ಸರ್ವಾಧಿಕಾರಿಗಳು ಕೊಡುತ್ತಾರೆ. ರಷ್ಯ, ಜರ್ಮನಿ, ಇಟಲಿಗಳೊಳಗೆ ಯಾವ ವ್ಯತ್ಯಾಸವೂ ಇಲ್ಲ. ಎಲ್ಲಾ ಹಲಕೆಲವು ಸಿರಿವಂತರ ಸ್ವಾರ್ಥದಾಟ.' ಎಂದು ರಷ್ಯದ ಮಾಜಿ ಪ್ರಧಾನರಾದ ಮೊ. ಅಲೆಕ್ಸಾಂಡರ್ ಕೆರೆನ್ಸ್ಕಿಯವರು ಲಂಡನಿನಲ್ಲಿ ಹೇಳಿದರು. ಇಂದಿನ ಸ್ಥಿತಿಯಲ್ಲಿ ಜರ್ಮನ್, ಇಟಲಿಗಳೊಂದಿಗೆ ರಷ್ಯವನ್ನು ಸೇರಿಸಿರುವುದರಲ್ಲಿ ಆಶ್ಚರ್ಯವಿದೆಯೆ?

●

## ಎಲ್ಲರೂ ಮತದಾರರಾಗಿರಿ!

ಮದ್ರಾಸ್ ಎಸೆಂಬ್ಲಿ ಮತದಾರರ ಪಟ್ಟಿಯಲ್ಲಿ ಓದು ಬರಹವರಿಯುವವರು ತಮ್ಮ ಹೆಸರುಗಳನ್ನು ಅಗೋಸ್ತು ತಿಂಗಳ ೩೦ನೆ ಮಂಗಳವಾರದ ತನಕ ಕೊಡಬಹುದು. ಪ್ರತಿಯೊಬ್ಬ ಶಿಕ್ಷಿತ ವ್ಯಕ್ತಿಯು ತನ್ನ ಹೆಸರನ್ನು ದಾಖಲು ಮಾಡಿಸಬೇಕೆಂದು ಹೇಳಬೇಕಾಗಿಲ್ಲ. ಅಪ್ಪಿತಪ್ಪಿ ಮುಂದೆ ಪಂಚಾಯತ್ ಬೋರ್ಡಿಗೆ, ಜಿಲ್ಲಾ ಬೋರ್ಡಿಗೆ, ಎಸೆಂಬ್ಲಿಗೆ ಯಾರಾದರೂ ಆರಿಸಲ್ಪಡುವ ಸಂಭವವಿದ್ದರೆ ಅದೇಕೆ ಮತದಾರರ ಪಟ್ಟಿಯಲ್ಲಿ ಹೆಸರಿಲ್ಲವೆಂದು ಮರುಗಬೇಕು? ಉಮೇದ್ವಾರರು ಚುನಾವಣೆಯ ಕಾಲಗಳಲ್ಲಿ ಅದೇಕೆ ನಿಮ್ಮ ಬಳಿ ಬರಬಾರದು? ಚುನಾವಣಾಕಾಲದಲ್ಲಾದರೂ ಒಬ್ಬ ದೊಡ್ಡ ವ್ಯಕ್ತಿಯಾಗುವ ಆಶೆಯು ಎಲ್ಲರಲ್ಲಿರಲಿ. ಅಗೋಸ್ತು ೩೦ನೆ ಮಂಗಳವಾರದ ನೆನಪಿರಲಿ!

—●● ●●—

# ಒಂದು ವರುಷದ ಭೀಕರ ಯುದ್ಧದಲ್ಲಿ



## ✻ ಚೀನಾ ಜಪಾನುಗಳ ಲಾಭನಷ್ಟಗಳು ✻

●

### ಚಿಕ್ಕ ಕಲಹವು ದೊಡ್ಡದಾಯಿತು.

ಜುಲಾಯಿ ೨, ೧೯೩೭. ಈ ದಿನವು ಚೀನಾ ಜಪಾನುಗಳ ಸುಖ ಶಾಂತಿಗೆ ಕುಠಾರಪ್ರಾಯವಾಗಿ ಪರಿಣಮಿಸಿತು. ಪೆಕಿಂಗಿನ ಬಳಿಯಲ್ಲಿರುವ ಲುಕೋಚಿಯಾ ರೈಲ್ವೇ ಜಂಕ್ಷನಿನಲ್ಲಿ ಆ ದಿನ ಚೀನಾ ಜಪಾನು ಸೈನಿಕರೊಳಗೆ ಚಿಕ್ಕದೊಂದು ಕಲಹವು ತಲೆದೋರಿತು. ಈ ಕಲಹವೇ ಇಂದಿನ ಭಯಾನಕ ಯುದ್ಧದ ಮೂಲ ಕಾರಣವೆಂದು ಪರಿಗಣಿಸಲ್ಪಟ್ಟಿತು.

X X

### ಜಪಾನಿನ ವಿಜಯು.

ಯುದ್ಧಾರಂಭವಾದ ಐದಾರು ತಿಂಗಳುಗಳಲ್ಲಿ ಜಪಾನು ಉತ್ತರ ಚೀನದ ಹೆಚ್ಚಿನಂಶವನ್ನು ಕೈವಶಪಡಿಸಿಕೊಂಡು ತನ್ನ ವಿಜಯ ಪತಾಕೆಯನ್ನು ಎತ್ತಿ ಹಿಡಿಯಿತು. ಮಂಗೋಲಿಯಾ ಮತ್ತು ಮಧ್ಯ ಚೀನಗಳ ಹೆಚ್ಚಿನಂಶವು ಜಪಾನಿಯರ ಪ್ರಾಬಲ್ಯಕ್ಕೊಳಗಾಯಿತಲ್ಲದೆ, ಯಾಂಗಟ್ಸೆ ಕ್ಯಾಂಗ್ ನದಿಯು ಪ್ರವಹಿಸುವ ಕೆಲವಂಶವೂ ನಾನ್ಕಿಂಗ್ ನಗರವೂ ಅವರ ಅಧೀನಕ್ಕೆ ಬರುವಂತಾಯಿತು. ದಕ್ಷಿಣ ಚೀನದಲ್ಲಿ ಜಪಾನು ಕರಾವಳಿಗಳ ಬಳಿಯಲ್ಲಿರುವ ಹಲವಾರು ದ್ವೀಪಗಳನ್ನು ವೈವಶಪಡಿಸಿಕೊಂಡಿತು.

X X

### ಸೂಚೋ ಯುದ್ಧ.

ಪ್ರಾರಂಭದ ಆರು ತಿಂಗಳುಗಳ ಯುದ್ಧದ ಪೈಕಿ ಟೀನ್‌ಸ್ಟನ್‌ಪುಕೊ, ಮತ್ತು ಲುಂಘ್ಯಾ ರೈಲ್ವೇಗಳು ಕೂಡುವೆಡೆಯಲ್ಲಿರುವ ಸೂಚೋ ಎಂಬ ಸ್ಥಳದ ಸಮೀಪ ನಡೆದ ಯುದ್ಧವು ಅತ್ಯಂತ ಭೀಕರವಾಗಿತ್ತು. ಐದು ತಿಂಗಳುಗಳ ತನಕ ಜಪಾನಿಯರು ಮಹತ್ವದ ಪ್ರಯತ್ನ ಮಾಡಿ ಯುದ್ಧದಲ್ಲಿ ಜಯಶಾಲಿಗಳಾಗಿ ಸೂಚೋವನ್ನು ಕೈವಶಪಡಿಸಿಕೊಂಡರು. ಸೂಚೊ ನಗರವು ಅವರಿಗೆ ಸಿಕ್ಕಿದ್ದರಿಂದಲೇ ಉತ್ತರ ಮತ್ತು ಸೆಂಟ್ರಲ್ ಚೀನಗಳ ಯುದ್ಧಾಳುಗಳನ್ನು ಒಂದುಗೂಡಿಸಲು ಸಾಧ್ಯವಾಯಿತು.

X X

### ಹೆಚ್ಚಿನಂಶವನ್ನು ಜಯಿಸಲಾಗಲಿಲ್ಲ.

ಜಪಾನಿಯರು ಇಷ್ಟು ಯತ್ನ ಮಾಡಿದರೂ ಚೀನದವರಧೀನದಲ್ಲಿರುವ ಭೂಮಿಯು ಇನ್ನೂ ಅಧಿಕವಾಗಿದೆ. ಮಿಕ್ಕುಳಿದ ಆರು ತಿಂಗಳುಗಳಲ್ಲಿ ಜಪಾನಿಯರು ಇತರ ದ್ವೀಪಗಳನ್ನು ದಕ್ಷಿಣ ತೀರದಲ್ಲಿ ಜಯಿಸಿದ್ದಾರೆ. ಇವುಗಳಲ್ಲಿ ಷಾ-ಮೆನ್ ಎಂಬುದು ಪ್ರಾಮುಖ್ಯವಾಗಿದೆ. ಈ ದ್ವೀಪದಲ್ಲಿಯೇ ಅಮೋಯ್ ಎಂಬ ಪ್ರಸಿದ್ಧ ಪಟ್ಟಣವಿರುವಂತಹದು.

X X

### ೧೪೦ ಕೋಟಿ ಚೀನೀಯರನ್ನು ಜಯಿಸಿದರು.

ಇಷ್ಟರ ತನಕ ಅಂದರೆ ಜುಲಾಯಿ ೭, ೧೯೩೮ರ ತನಕ ಜಪಾನಿಯರು ೩೭೦,೦೦೦ ಚದರ ಮೈಲುಗಳಷ್ಟು ಭೂಮಿಯನ್ನೂ ಅದರಲ್ಲಿದ್ದ ೧೪೦ ಕೋಟಿ ಚೀನೀಯರನ್ನೂ ತಮ್ಮ ಕೈವಶಪಡಿಸಿಕೊಂಡಂತಾಯಿತು. ಜರ್ಮನಿ, ಇಟಲಿ, ಸ್ವಿಝರ್‌ಲೇಂಡ್, ಬೆಲ್ಜಿಯಮ್ ಮತ್ತು ನೆದರ್‌ಲೇಂಡ್ಸ್‌ಗಳನ್ನು ಒಟ್ಟುಗೂಡಿಸಿದರೆ ೧೪೦ ಕೋಟಿ ಜನಸಂಖ್ಯೆಯಾದಂತಾಗುತ್ತದೆ. ಅಷ್ಟು ವಿಸ್ತಾರದ ಭೂಮಿಯು ಜಪಾನ್ ಸಾಮ್ರಾಜ್ಯದ ದವಡೆಗೆ ಸಿಲುಕಿತು.

X X

### ಶೇಕಡಾ ೮೭ ಚೀನೀಯರಿಗಿದೆ.

ಆದರೆ ಚೀನದ ಸೆಂಟ್ರಲ್ ಸರಕಾರದಧೀನದಲ್ಲಿ ಇನ್ನೂ ೨,೫೦೦,೦೦೦ ಚದರ ಮೈಲು ಭೂಮಿಯೂ ಸುಮಾರು ೨೯೦ ಕೋಟಿ ಜನರೂ ಇದ್ದಾರೆ. ಅಂದರೆ ಯುದ್ಧದ ಮೊದಲಿದ್ದ ಭೂಮಿಯ ಶೇಕಡಾ ೮೭ರಷ್ಟು ಅಂಶವು ಮತ್ತು ಜನಸಂಖ್ಯೆಯ ಶೇಕಡಾ ೬೫ರಷ್ಟು ಅಂಶವು ಚೀನೀ ಸರಕಾರದ ಅಧೀನದಲ್ಲಿದೆ. ಧೀರ ಸ್ವಭಾವದ ಚೀನೀಯರು ತಮ್ಮ ಗೌರವವನ್ನು ಕಾಯ್ದುಕೊಳ್ಳುವರೇ ಎಂಬುದನ್ನು ಕಾಲವೇ ಹೇಳಬೇಕಾಗಿದೆ.

---

# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | | |
|---|---|---|---|---|
| ಶಾಂತಿ ಪುರಾಣ | | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ | | 1 | 0 | 0 |
| ಸರಸ್ವತೀ (ಸಾಮಾಜಿಕ ನಾಟಕ) | | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ (ಇಂಗ್ಲಿಷ್ ಸ್ವಯಂಬೋಧಿನಿ) | | 0 | 8 | 0 |
| ಸಾಮುದ್ರಿಕ ಶಾಸ್ತ್ರ | | 0 | 8 | 0 |
| ಹೊಂದೊವಲ ಹಂಬಲು. | | 0 | 6 | 0 |
| ವೀರಭೂಮಿ (ಕತೆ) | | 0 | 1 | 6 |
| ಗೀತೆಯ ಕೈಗನ್ನಡಿ | | 0 | 4 | 0 |
| ಗೀತೆಯ ಮೂಲ (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ | I | 0 | 1 | 0 |
| ಡಿ | II | 0 | 1 | 0 |
| ಡಿ | III | 0 | 1 | 0 |
| ಡಿ | IV | 0 | 1 | 0 |
| ಪುರಂದರ ದಾಸರ ಪದ ಭಾಗ | I | 0 | 4 | 0 |
| ಡಿ | II | 0 | 4 | 0 |
| ಡಿ | III | 0 | 4 | 0 |
| ಮಧುವನ | | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | | 0 | 4 | 0 |
| (Gouthama the Buddha) | | 0 | 8 | 0 |
| ಭಗವದ್ಗೀತೆ | | 0 | 2 | 0 |
| ಕುಕ್ಕುಟ ಪಂಚಾಂಗ | | 0 | 1 | 0 |
| ಮಗ್ಗಿ | | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ | | 0 | 1 | 0 |
| ವೈಜಯಂತೀ ಪಂಚಾಂಗ | | 0 | 2 | 6 |
| ಜಯಪಾಂಡ್ಯ ವಿಜಯ | | 0 | 2 | 0 |

## - ತುಳು ಪುಸ್ತಕಲು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) (ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) (ವಿಮರ್ಶಾತ್ಮಕ ಲೇಖನ) | 0 | 2 | 0 |
| ಅಳಿಯ ಸಂತಾನ ಕಟ್ಟದ ಗುಟ್ಟು | 0 | 4 | 0 |
| ಕಾನಿಗ್ (ಪದ್ಯ) | 0 | 4 | 0 |
| ತುಳುವ್ಯಾಕರಣ | 0 | 8 | 0 |
| ಜನಮಲ್ಫ್ (ನಾಟಕ) | 0 | 6 | 0 |
| ಮದ್ಮಾಳತ್ತ ಮದ್ಮಾಯೆ (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ | 0 | 1 | 0 |
| ಪದ್ಯಮಾಲಿಕೆ | 0 | 1 | 0 |
| ಮಿತ್ಯನಾರಾಯಣ ಕತೆ. | 0 | 8 | 0 |
| ಸತೀ ಕಮಲ್ (ನಾವೆಲ್) | 0 | 6 | 0 |
| ಕನ್ಯೋಪದೇಶ | 0 | 2 | 0 |
| ಕನ್ನಡಕೊ | 0 | 0 | 6 |
| ವಾಲಿಸುಗ್ರೀವರ ಕಾಳಗ. | 0 | 3 | 0 |
| ಬೊಬ್ಬರ್ಯ (ಪಾಡ್ದನ) | 0 | 2 | 0 |
| ತೊಡಕಿನಾರ್ ,, | 0 | 2 | 0 |
| ಮುಂಡತ್ತಾಯ ,, | 0 | 2 | 0 |
| ವಿಶ್ವರೂಪ ದರ್ಶನ (ಗೀತೆಯ II ನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) | 0 | 1 | 0 |
| ಭಗವದ್ಗೀತೆ | 0 | 5 | 6 |

**ತುಳುನಾಡ್ ಪ್ರೆಸ್,**

**ಉಡುಪಿ, ದ. ಕ.**

# ಈ ಸಮಸ್ಯೆಯನ್ನು ಬಿಡಿಸುವ ಬಗೆ ಹೇಗೆ?

ಬರೆದವರು

**ಶ್ರೀ. ಹಯವದನ ರಾಯರು.**



ಸ್ಪರ್ಧೆಯಲ್ಲೇ ನಿರ್ಣಯವಾಗಬೇಕೆಂದು ಅಧ್ಯಕ್ಷ ಹಾರ್ವೆಯವರನ್ನುತ್ತಾರೆ!





**ಶೇಕ್ಸ್‌ಪಿಯರನೂ ನಿಶ್ಚೈಸಲಿಲ್ಲ.**

ಶೇಕ್ಸ್‌ಪಿಯರ್ ಮಹಾಕವಿಯು ಕೂಡಾ ಈ ಪ್ರಶ್ನೆಯ ತೀರ್ಮಾನಕ್ಕೆ ಕೈಹಾಕದಿರುವುದನ್ನು ನೋಡುವಾಗಲೇ ಇದು ಸಾಮಾನ್ಯ ಪ್ರಶ್ನೆಯಲ್ಲ; ಆದರೆ ಮಹತ್ವದ ಒಂದು ಸಮಸ್ಯೆಯೆಂದು ವ್ಯಕ್ತವಾಗುತ್ತದೆ. ರೋಮಿಯೊನೊಡನೆ ಜೂಲಿಯೆಟಳು ತನ್ನನ್ನು ಮುದ್ದಿಡೆನ್ನುವಾಗ "ಸಾಧ್ಯವಿದ್ದಷ್ಟು ಕಾಲ ಮುದ್ದಿಡು; ಆದರೆ ಆ ಚುಂಬನವು ಚಿರಸ್ಥಾಯಿಯಾಗಿರಬೇಕು" ಎನ್ನುತ್ತಾಳೆ. ಶೇಕ್ಸ್‌ಪಿಯರ್ ಕೂಡಾ ಚುಂಬನದ ಕಾಲ ನಿರ್ಣಯ ಮಾಡುವ ಅಧಿಕಾರವನ್ನು ಸಂಬಂಧ ಪಟ್ಟವರಿಂದ ಅಪಹರಿಸುವ ಗೊಡವೆಗೆ ಹೋಗಿಲ್ಲ.

**ಕಾಲನಿರ್ಣಯ ಸಮಸ್ಯೆ.**

ಇದನ್ನು ಅಶ್ಲೀಲ ವಿಚಾರವೆಂದು ಅಲಕ್ಷಿಸಬೇಡಿ. **ಈ ಕುರಿತು ಇತ್ತೀಚೆಗೆ ಇಂಗ್ಲೆಂಡಿನ ಒಂದು ಕೋರ್ಟಿನಲ್ಲಿ ಒಂದು ವ್ಯವಹರಣೆಯಿತ್ತು. ಆದನ್ನು ಹೇಳುವ ಮೊದಲು ಚುಂಬನ ಕಾರ್ಯವನ್ನು ಆದೆಷ್ಟು ಸಮಯದ ತನಕ ನಡೆಸ ಬಹುದು ಎಂಬ ಪ್ರಶ್ನೆಯ ಕುರಿತು ಯೋಚಿಸಬೇಕಾಗುತ್ತದೆ. ಹೀಗೆಂದೊಡನೆಯೇ ಹಲವಾರು ಯುವಕರು "ಇದೇತರ ಮಹತ್ವದ ಕಾರ್ಯ?" ವೆಂದು ತಮ್ಮ ಅಲಕ್ಷ್ಯವನ್ನು ವ್ಯಕ್ತಪಡಿಸ ಬಹುದು. ಆದರೆ ಇದು ಭಾವಿಸುವಷ್ಟು ಸುಲಭವಾಗಿಲ್ಲ. ಸಂಬಂಧಪಟ್ಟ ಪ್ರಣಯಿಗಳೊಳಗೆ ನಡೆಯುವ ಈ ವಿಚಾರವನ್ನು ಇತರರು ನಿಶ್ಚೈಸುವುದು ಕಷ್ಟವಾಗಿದೆ.**

**ನ್ಯಾಯಾಧೀಶರೂ ತಬ್ಬಿಬ್ಬಾದರು!**

ಇದೇ ಸಮಸ್ಯೆಯನ್ನು ಇಂಗ್ಲೆಂಡಿನ ಒಂದು ಪೋಲಿಸ್ ಕೋರ್ಟಿನವರು ಸ್ವಲ್ಪ ಸಮಯದ ಹಿಂದೆ ಬಿಡಿಸಬೇಕಾಯಿತು. ವಕೀಲರು ತಮ್ಮ ಉಪಯುಕ್ತ ಸಲಹೆಗಳನ್ನಿತ್ತರೂ ಈ ಸಮಸ್ಯೆಯನ್ನು ಬಗೆಹರಿಸಲು ನ್ಯಾಯಾಧೀಶರಿಗೆ ಅಸಾಧ್ಯವಾಗಿ ಪರಿಣಮಿಸಿತು. ಈ ವಾರ್ತೆಯನ್ನು ನೀವು ಪತ್ರಿಕೆಗಳಲ್ಲಿ ಓದಿರಬಹುದು. ಆದರೆ ಅದರ ಪೂರ್ಣ ವಿವರವನ್ನು ಕೊಟ್ಟರೆ ಕತೆಯು ನಿಮಗೆ ಪೂರ್ಣ ತಿಳಿದಂತಾಗುವುದು.

**ಐದು ನಿಮಿಷಗಳ ಅತ್ಯಾಚಾರ.**

ಕುಮಾರಿ ವಿನಿಫ್ರೆಡ್ ಮೇ ಸ್ಟ್ರಿಕ್‌ಲೇಂಡ್ ಎಂಬಾಕೆ ಇಪ್ಪತ್ತು ವರುಷಗಳ ತರುಣಿ. ಫ್ರಾಮ್ಟನ್ ಗ್ರಾಮದ ಆರ್ನಾಲ್ಡ್ ಸ್ಪ್ರೀಕ್ ಎಂಬವನು ಡಾರ್ಚೆಸ್ಟರ್ ಎಂಬಲ್ಲಿಂದ ಹಿಂತಿರುಗಿ ಬರುವಾಗ ತನ್ನ ಮೋಟಾರ್ ಬಸ್ಸಿನಲ್ಲಿದ್ದ ಆಕೆಯನ್ನು ಎಡೆಬಿಡದೆ ಐದು ನಿಮಿಷಗಳ ಕಾಲ ಚುಂಬಿಸಿದನೆಂದು ಆಕೆಯ ದೂರು.

**ಸಿನೆಮಕ್ಕಿಂತಲೂ ಮಿಗಿಲು.**

**ಕೋರ್ಟಿನಲ್ಲಿ ತಪ್ಪಿತಸ್ಥನ ಕಡೆಯ ವಕೀಲರು ವಾದಿ**ಸುತ್ತಾ ಹೀಗೆಂದರು: "ಇದು ಚಲಚ್ಚಿತ್ರಗಳ ಚುಂಬನಕ್ಕಿಂತಲೂ ಮಿಗಿಲಾದಂತಾಯಿತು. ಯಾರನ್ನಾದರೂ ಐದು ನಿಮಿಷಗಳ ತನಕ ಚುಂಬಿಸುವುದು ಸಾಧ್ಯವೋ ಎಂದು ನನಗೆ ಸಂಶಯವಾಗುತ್ತದೆ." ಆಗ ಬಳಿಯಲ್ಲಿಯೇ **ಇದ್ದ ಕ್ಲಾರ್ಕರಿಗೆ ಎಚ್ಚರವಾಗಿ "ಇಲ್ಲ ಮಿ। ಮೋರ್ಟನರೇ. ನನಗೆ ಅದರ ಅನುಭವವಿಲ್ಲ" ಎಂದರು.**

**ಪಾಪ ಡ್ರೈವರ್!**

ಕ್ಲಾರ್ಕರು ಹಾಗೆಂದೊಡನೆಯೇ ವಕೀಲರು: ಕ್ಲಾರ್ಕರಿಗೆ ನನ್ನಿಂದ ಹೆಚ್ಚಿನ ಅನುಭವವಿರಬೇಕು" ಎಂದು ಹೇಳಿದರು. ಮೋಟಾರ್ ಡ್ರೈವರ್ ಸ್ಪಾರ್ಕರು ತಾನು ನಿರಪರಾಧಿಯೆಂದು ಹೇಳುತ್ತಾ ಅವರು ಆಕೆಯನ್ನು ಚುಂಬಿಸಲಿಲ್ಲವೆಂದೂ, ಆಕೆಯ ಹೆಗಲ ಮೇಲೆ ಕೈಯನ್ನು ಕೂಡಾ ಇಡಲಿಲ್ಲವೆಂದೂ ಹೇಳಿದರು. ಅವರ ಕಡೆಯ ವಕೀಲರು ಹೀಗೆಂದರು: "ಸ್ಪಾರ್ಕರವರು ಇನ್ನಿತರರಿರುವಾಗ ಹುಡುಗಿಯನ್ನು ಐದು ನಿಮಿಷಗಳ ವರೆಗೆ ಮುದ್ದಿಟ್ಟರೆಂಬುದು ಸುಳ್ಳಾಗಿ ಕಂಡುಬರುತ್ತದೆ."



"ಚಲಚ್ಚಿತ್ರಗಳಲ್ಲಿ ಅಭ್ಯಾಸಮಾಡುತ್ತಿರುವಾಗ ಅದೆಷ್ಟು ಸಾವಿರ ಅಡಿ ಫಿಲ್ಮು ಹಾಳಾಗುವುದಿಲ್ಲ . . . ."

**ಕೋರ್ಟೂ ಬೆದರಿತು!**

ಕೊನೆಗೆ ಕೋರ್ಟಿನಲ್ಲಿ ಮುದ್ದಿಡುವ ಮೂಲ ಕಲೆಕೆಗೆ ಜಖಮಾಯಿತೆಂದು ನಿರ್ಣಯಿಸಲಾಯಿತು. ಆದರೆ ಆ ನಿರ್ಣಯದಲ್ಲಿ ಚುಂಬನದ ಸಮಯದ ಕುರಿತು ಒಂದೇ ಒಂದು ಶಬ್ದವಾದರೂ ಬರೆಯಲ್ಪಟ್ಟದ್ದಿಲ್ಲ.

**ಫಾಸಿ ಶಿಕ್ಷೆಯಾಗಲಿಲ್ಲ.**

ಈ ಸಂದರ್ಭದಲ್ಲಿ ಹೇಳಬೇಕಾದ ಸಂತೋಷದ ವಿಚಾರವೆಂದರೆ ಡ್ರೈವರ್ ಸ್ಪಾರ್ಕನು ಮಾಡಿದ ಮಹದಪರಾಧಕ್ಕಾಗಿ ಸುಧಾರಣಾ ಜೈಲಿನಲ್ಲಿರಿಸಲ್ಪಟ್ಟನಲ್ಲದೆ ಫಾಸಿ ಶಿಕ್ಷೆಯು ಅವನಿಗೆ ವಿಧಿಸಲ್ಪಡಲಿಲ್ಲ.

**ಸಮಸ್ಯೆ ಬಿಡಿಸುವುದೆಂತು?**

ಇದು ಹೇಗಿದ್ದರೂ ಎಷ್ಟು ಕಾಲದ ತನಕ ಚುಂಬಿಸಬಹುದೆಂಬ ಪ್ರಶ್ನೆಗೆ ಇನ್ನೂ ಉತ್ತರವು ಸಿಕ್ಕಿದಂತಾಗಲಿಲ್ಲ. ಕುಮಾರಿ ಸ್ಟ್ರಿಕ್‌ಲೇಂಡಳನ್ನು ನಂತೆ ಅದು ಐದು ನಿಮಿಷಗಳಷ್ಟು ದೀರ್ಘವಾಗ ಬಹುದೆ? ಅಥವಾ ಆಕೆಗೆ ಇಚ್ಛೆಯಿದ್ದಿಲ್ಲವೆಂದು ಅದನ್ನು ಅತಿಶಯೋಕ್ತಿಯಾಗಿ ಮಾಡಿರುವುದೇ?

**ಕಂತಿನ ಕಾರ್ಯ.**

ಈ ಸ್ವಾರಸ್ಯದ ವಿಷಯದ ಕುರಿತು ಮಹತ್ವದ ಒಂದು ಚರ್ಚೆಯು ಉಂಟಾಗಿದೆ. ಕುಮಾರಿ ಸ್ಟ್ರಿಕ್‌ಲೇಂಡಳ ಇತ್ತೀಚೆಗಿನ ಕೋರ್ಟು ಹೇಳಿಕೆಯಿಂದಾಗಿ ಸಮಸ್ಯೆಯು ಮತ್ತಷ್ಟೂ ಜಟಿಲವಾಗಿ ಪರಿಣಮಿಸಿದೆ. ವಿಚಾರಿಸಲಾಗಿ ಅಂದಿನ ಪ್ರಸನವು ಒಮ್ಮೆಯೇ ನಡೆದದ್ದಲ್ಲವೆಂದೂ, ಚುಂಬನಾ ಕಾರ್ಯವು ಕಂತಿನಲ್ಲಿ ನಡೆಯಿತೆಂದೂ ತಿಳಿದು ಬರುತ್ತದೆ.

**ವಿಶ್ವಪ್ರಯತ್ನ.**

ಇದರಿಂದಾಗಿ ಇದರ ಕಾಲ ನಿರ್ಣಯ ಕಾರ್ಯವು ಕಷ್ಟವಾಗಿದೆ. ಅಂದು ಕೋರ್ಟಿನ ಮುಂದೆ ವಾದಿಸಿದವರು ಈಗ ಇದರಲ್ಲಿ ಯಾವ ಅಭಿರುಚಿಯನ್ನೂ ತೋರಿಸದಿದ್ದರೂ ಮುದ್ದಾಟದಲ್ಲಿ ಅನುಭವ ಪಡೆಯುತ್ತಿರುವ ಅನೇಕ ನವದಂಪತಿಗಳು, ಮುದುಕರು, ಪ್ರೊಫೆಸರರು, ಪಂಡಿತರು, ಅರೆವಯಸ್ಸಿನವರು, ಅವಿವಾಹಿತರು, ವಿಧುರರು—ಇವರೇ ಮೊದಲಾದವರು ಹೊಸ ಯತ್ನಗಳನ್ನು ಮಾಡುತ್ತಿದ್ದಾರೆ. ಈ ವಿಚಿತ್ರ ಸಮಸ್ಯೆಯನ್ನು ಅವರೇ ಬಿಡಿಸಲೆತ್ನಿಸುತ್ತಿದ್ದಾರೆ. ಈ ಸ್ವಾರಸ್ಯಮಯ ವಿಚಾರದ ಕುರಿತು ಬಹಿರಂಗದಲ್ಲಲ್ಲದಿದ್ದರೆ ಅಂತರಂಗದಲ್ಲಿಯಾದರೂ ಪ್ರತಿಯೊಬ್ಬ ತರುಣ ತರುಣಿಯರೂ ತಮ್ಮ ಅನುಭವವನ್ನು ಹೇಳದಿರಲಾರರು.

**ಚುಂಬನಾ ಸ್ಪರ್ಧೆ!**

ಈ ವಿಚಾರದ ಕುರಿತು ಅಭಿಪ್ರಾಯ ವ್ಯತ್ಯಾಸಗಳು ಬಹಳವಾಗಿರುವುದರಿಂದ ಇಂಗ್ಲೆಂಡಿನಲ್ಲಿರುವ ವೇಮೌತ್ ವಿದ್ಯಾಸಮಿತಿಯ ಅಧ್ಯಕ್ಷರಾದ ಜೆ. ಹಾರ್ವೇಯೆಂಬವರು ಸಮಯೋಚಿತವಾದ ಒಂದು ಸೂಚನೆ ಕೊಟ್ಟಿದ್ದಾರೆ. ಈ ಪ್ರಶ್ನೆಗೆ ಸಮರ್ಪಕವಾದ ಉತ್ತರ ಸಿಗಬೇಕಾದರೆ ಚುಂಬನಾ ಸ್ಪರ್ಧೆಯೊಂದನ್ನು ನಡೆಸಬೇಕೆಂದು ಅವರ ಸೂಚನೆ. "ಪ್ರಣಯಿಗಳು ಏನನ್ನೆಲ್ಲಾ ಮಾಡಬಲ್ಲರು ಎಂಬುದನ್ನು ಅವರು ಒಮ್ಮೆಗೆ ನಿಶ್ಚೈಸಿಬಿಡಲಿ" ಎಂದವರ ವಾದ. ಅಂಥಹ ಒಂದು ಸ್ಪರ್ಧೆಯನ್ನೇರ್ಪಡಿಸಿದರೆ ಅವರು ಅದರ ಜಡ್ಜರಾಗುವರೆಂದು ಕೂಡಾ ಹೇಳಿ ತಮ್ಮ ಉದಾರತೆಯನ್ನು ವ್ಯಕ್ತಪಡಿಸಿದ್ದಾರೆ.

ಇಷ್ಟು ಮಾತ್ರವಲ್ಲ; "ಐದು ನಿಮಿಷಗಳ ತನಕ ಚುಂಬಿಸುವುದು ಅಸಾಧ್ಯವೆಂದು ನನ್ನಭಿಮತ; ಆದರೆ ಈ ಕಲೆಯಲ್ಲಿ ನಾನೊಬ್ಬ ತಜ್ಞನಲ್ಲ" ಎಂದು ಹಾರ್ವೇಯವರು ಹೇಳಿದ್ದಾರೆ.

**ಸರ್ವರಿಗೂ ಎಡೆಯಿರಬೇಕು.**

ಅಧ್ಯಕ್ಷ ಹಾರ್ವೆಯವರ ಸೂಚನೆಯು ಲಕ್ಷ್ಯಾರ್ಹವಾಗಿದೆ ಆದರೆ ಈ ಸ್ಪರ್ಧೆಯಲ್ಲಿ ಪ್ರಣಯಿಗಳು ಮಾತ್ರ ಭಾಗವಹಿಸಬಹುದೆನ್ನುವ ನಿಯಮವೇಕಿರಬೇಕೆಂದು ನನ್ನ ಪ್ರಶ್ನೆ. ಸ್ಪರ್ಧೆಯಲ್ಲಿ ಭಾಗವಹಿಸುವವರು ತಮಗೆ ಬೇಕಾದವರನ್ನು ಆರಿಸಿಕೊಳ್ಳಲಿ; ಆದರೆ ಈ ಸ್ಪರ್ಧೆಯಲ್ಲಿ ಭಾಗವಹಿಸುವ ಹಕ್ಕು ಮಾತ್ರ ಎಲ್ಲರಿಗೂ ಇರಬೇಕು.

**ನಾಚಿಕೆಯ ತೊಡಕು.**

ಈ ಸಂದರ್ಭದಲ್ಲಿ ಸ್ಪರ್ಧೆಯನ್ನು ನಡೆಸಲು ಉಂಟಾಗುವ ತೊಂದರೆಗಳ ಕುರಿತು ಒಂದು ಮಾತು ಹೇಳಬೇಕಾಗಿದೆ. ಹೆಚ್ಚಿನ ತರುಣ ತರುಣಿಯರು ಬಹಿರಂಗದಲ್ಲಿ ಚುಂಬನಾಸ್ಪರ್ಧೆಯಲ್ಲಿ ಭಾಗ ವಹಿಸುವುದು ಅಶಕ್ಯವೆಂದು ಕಾಣುವುದರಿಂದ ಕೆಲವರು ಹಿಂಜರಿಯಬಹುದೆಂದೂಹಿಸಬಹುದು.

ಸ್ಪರ್ಧೆಯಲ್ಲಿ ನಾಚಿಕೆ, ಭೀತಿಗಳೆಂಬುದಾವುವೂ ಇಲ್ಲ. ಮುದ್ದಾಡಲಿಚ್ಛಿಸುವವರೆಲ್ಲರೂ ಧೈರ್ಯದಿಂದ ಮುಂದೆ ಬರಲೆಡೆಯಿರಬೇಕು.

**ಅಶ್ಲೀಲವಲ್ಲ; ನಡೆವ ಕತೆ!**

ಈ ಸ್ಪರ್ಧೆಯ ವಿಚಾರವು ಅಶ್ಲೀಲವೆಂದು ನನ್ನ ವಾಚಕರಿಗೆ ಕಾಣಬಹುದು. ಆದರೆ ಚುಂಬನಾ ಸ್ಪರ್ಧೆಗಳು ಅಮೇರಿಕದ ಯುನೈಟೆಡ್ ಸ್ಟೇಟ್ಸನಲ್ಲಿ ನಡೆಯುತ್ತಿವೆಯೆಂದೊಡನೆ ಅವರಿಗೆ ಸಮಾಧಾನವಾಗಬಹುದು. ದಾಖಲೆ ಮುರಿಯುವವರ ತವರೂರಾದ ಅಮೇರಿಕದಲ್ಲಿ ಎಲ್ಲಾ ಉತ್ಸವಕಾಲಗಳಲ್ಲಿ ಈ ಸ್ಪರ್ಧೆಯನ್ನೇರ್ಪಡಿಸುತ್ತಾರೆ. ಇತ್ತೀಚೆಗೆ ಅಖಿಲ ಅಮೇರಿಕಾ ಎಡೆಬಿಡದೆ ಚುಂಬಿಸುವ ಒಂದು ಸ್ಪರ್ಧೆಯ ಸಮಾರಂಭವು ನಡೆಯಿತು. ಅದರಲ್ಲಿ ನ್ಯೂಯಾರ್ಕಿನ ನವದಂಪತಿಗಳು ಬಹುಮಾನವನ್ನು ಪಡೆದರು. ಇನ್ನು ಹೊಲಿವುಡ್ಡಿನ ಕುರಿತೇನು? ಅಲ್ಲಿ ಚುಂಬನಗಳು ಮರಗಳಿಂದ ಹಣ್ಣೆಲೆಗಳುದುರುವಂತೆ ಸದಾ ಎಲ್ಲೆಲ್ಲಿಯೂ ಬೀಳುತ್ತಿರುತ್ತವೆ. ಅವರಂತಿರಲಿ, ಇದನ್ನೋದುತ್ತಿರುವ ಮಿತ್ರರೆ, (ತತ್ಕಾಲಕ್ಕೆ ಕುರ್ಚಿಯಲ್ಲಿರುವ ತಗಣೆಯ ಕಡಿತವನ್ನು ಕೂಡಾ ಮರೆತು ಓದುತ್ತಿರುವ) ನೀವು ಕೂಡಾ ಚಲಚಿತ್ರದಲ್ಲಿ ಕಾಣುತ್ತಿರುವ ಚುಂಬನದೃಶ್ಯಗಳು ಅಷ್ಟೊಂದು ಸುಲಭವಾದುವುಗಳೆಂದು ಭಾವಿಸಬೇಡಿ. ಜಾಲ್ ಮರ್ಚೆಂಟನು ಜುಬೇದಳನ್ನು ಮುದ್ದಿಸುವ ಆ ಕಲೆಯ ಅಭ್ಯಾಸಕ್ಕಾಗಿ ಅದೆಷ್ಟು ಸಾವಿರ ಅಡಿ ಪಟಲವು ಖರ್ಚಾಗುತ್ತಿಲ್ಲ?

**ನೆನಪಿರಲಿ!**

ಐದು ನಿಮಿಷಗಳ ತನಕ ಎಡೆಬಿಡದೆ ಚುಂಬಿಸಲು ನಿಮಗೆ ಸಾಧ್ಯವಿದೆಯೇ? ಇದನ್ನೋದುವ ಹಲವಾರು ತರುಣರು "ನೋಡಿ ಬಿಡುವಾ!" ಎಂದು ಸ್ಫೂರ್ತಿಯಿಂದ ಏಳಬಹುದು. ಆದರೆ ನಿಮ್ಮ "ಹೃದಯ ರಾಣಿ"ಯನ್ನು ಕಂಡಾಗ ಜಾಗರೂಕರಾಗಿರಿ! ಹೀಗೆನ್ನಲು ಒಂದು ಕಾರಣವಿದೆ. ನನ್ನ ಗೆಳೆಯನೊಬ್ಬನು ಇತ್ತೀಚೆಗೆ ಇದೇ ಪರಿಶೋಧನೆ ಮಾಡಿ ಅವನ 'ಮಮತೆಯ ವಸ್ತು'ವಿನ ಸಖ್ಯವನ್ನೇ ಕಳೆದುಕೊಂಡಿದ್ದಾನೆ. ಕಾರಣ- ಆಕೆಯೆಂದಳಂತೆ! "ನಿನಗೆ ಚುಂಬನದ ಅನುಭವವಿದೆ. ಇಲ್ಲದಿದ್ದರೆ ಅಷ್ಟು ಹೊತ್ತಿನ ತನಕ ನೀನು ಚುಂಬಿಸಿದ್ದಾದರೂ ಹೇಗೆ?" ತರುಣಿಯರಿಗೆ ಮತ್ಸರವಿದೆಯೆಂಬುದು ನಿಮಗೆ ನೆನಪಿರಲಿ!....

---

**ನನಗರಿಯದು ನಿಮಗೆ**



ಷಣ್ಮುಖಂ ಚೆಟ್ಟಿಯಾರರಿಗೆ
ಆರು ತಲೆಗಳಿವೆಯೇ?

# ವಾರದ ಪಂಚಾಂಗ

## ಬಹುಧಾನ್ಯ ಸಂ|ರದ ಆಷಾಢ ಕೃಷ್ಣಪಕ್ಷ ಮತ್ತು ಶ್ರಾವಣ ಶುಕ್ಲಪಕ್ಷ

**ಕರ್ಕಟಕ (ಆಟಿ) ೮ರಿಂದ ೧೪ರ ವರೆಗೆ. ಮಹಾನಕ್ಷತ್ರ — ಪುಷ್ಯ**

### ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 24 | ೧೨ | ರ ೨೯||| | ಮೃ೪೯|| | ಧ್ರು೩೦||| | ಕೌ೨| | ವಿ೬||| | ಅ೨೯ | ಮಿಥುನೇಚ೨೧|| ಪ್ರದೋ. ದಗ್ಧಯೋ. ೧೨ |
| 25 | ೧೩ | ಚ ೨೩ | ಆರ್೪೫|| | ವ್ಯಾ೨೩| | ವ೨೩ | ವಿ೯| | ಅ೨೨| | ಹು೩ಶು೨ ಮಾಸಶಿವರಾತ್ರಿ |
| 26 | ೧೪ | ಕು ೧೭ | ಪುನ೪೧|| | ಹರ್೧೫|| | ಶ೧೭ | ವಿ೧೩|| ವಿ೬೦ | ಅ೩೫||| | ಪ್ಯು೩ರ೪೮ಕರ್ಕಟೇಚ೨೭|| ಮ೩ಬು೩೫ ನಕ್ತಂಅಮಾ. |
| 27 | ೩೦ | ಬು ೧೧ | ಪ್ಯು೩೭|| | ವ೮ | ನಾ೧೧ | ವಿ. ಶೆ.೪ | ಅ೨೨|| | ಪ್ಯು೩ಕು೪೭ಹು೪ಶು೯ದೀವಿಗೆಹಬ್ಬ ● ಅಮಾವಾ. |
| 28 | ೧ | ಗು೫| ಉಪ೫೪||| | ಆ್ಲ೩೪ | ಸಿ||| ಉಪ೫೩ | ಬ೫| | ವಿ೭||| | ಅ೩೦| | ಸಿಂಹೇಚ೩೪ ಚಂ.ದರ್ಶನಂ |
| 29 | ೩ | ಶು ೫೫|| | ಮ೩೧ | ವ೪೭|| | ತೈ೨೭||| | ವಿ೨|ವಿ೫೦| | ಅ೨೫| | ಸಂಪಚ್ಛುಕ್ರವಾರಃ |
| 30 | ೪ | ಶ ೫೧|| | ಹು೨೯ | ಪ೪೧||| | ವ೨೩|| | ವಿ೪೬|| | ಅ೧೩|| | ಪ್ಯು೪ರ೧೭ಕನ್ಯಾಚ೪೩||| ಶ್ರಾವಣಶನಿವಾರಃ |

### ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 24 | ೧೨ | ರ೩೫| | ಮೃ೫೪ | ಧ್ರು೩೪||| | ಕೌ೯| | ವಿ೧೨||| | ಅ೩೪| | ಮಿಥುನೆಚ೨೭ವ್ಯ.ನಿ ೩೫||| |
| 25 | ೧೩ | ಚ೨೬|| | ಆರ್೪೭ | ವ್ಯಾ೨೫ | ಗ೧ | ವಿ೩||| | ಅ೨೫ | ಪೂ೩ಶು೩೦ ಪ್ರದೋಷಃ |
| 26 | ೧೪ | ಕು೧೭| | ಪುನ೩೯|| | ಹರ್೧೫ | ಶ೧೭| | ವಿ೧೩| ವಿ೫೭| | ಅ೩೪| | ಪ್ಯು೩ರ೩೮ಕರ್ಕಟೇಚ೨೬|| ಮ೩ಬು೩೮ |
| 27 | ೩೦ | ಬು೭||| ಉಪ೫೦||| | ಪ್ಯು೩೨| | ವ್ರ೪| ಉಪ೪೯||| | ನಾ೭||| | ವಿ.ಶೆ.||| | ಅ೧೮| | ಪ್ಯು೩ಕು೩೧ ● ಅಮಾವಾ. |
| 28 | ೨ | ಗು೫೦ | ಆ್ಲ೨೫|| | ವ್ಯ೪೪|| | ಬಾ೨೪| | ವಿ||ವಿ೫೨||| | ಅ೨೨ | ಸಿಂಹೆಚ೨೫|| ಪೂ೪ಶು೨೭ ಚಂದ್ರದರ್ಶನಂ |
| 29 | ೩ | ಶು೪೨||| | ಮ೨೯||| | ವರಿ೩೩| | ತೈ೧೬|| | ವಿ೩೭||| | ಅ೧೪| | ಮ೪ಬು೪೮ಜಮಾದಿಲಾ. |
| 30 | ೪ | ಶ೩೭| | ಪೂ೧೫| | ಪ೨೮| | ವ೧೦ | ವಿ೩೨|| | ಅ|ಅ೫೫| | ಪ್ಯು೪ರ೭ಕನ್ಯಾಚ೨೯||| ಪು. ಪ. ಅಗಸ್ತ್ಯೋದಯ |

# ಈ ವಾರ ನಿಮಗೇನಾಗುತ್ತದೆ?

# ನಿಮ್ಮ ಅದೃಷ್ಟದ ಅಂತರಂಗ!

**ತಾ. ೨೪—೭—೧೯೩೮ರಿಂದ ೩೦—೭—೧೯೩೮ರವರೆಗೆ**

**ಮೇಷ:—**

ನಿಮಗೆ ಈ ವಾರದಲ್ಲಿ ಹೊಸಬರನೇಕರ ಪರಿಚಯವಾಗಲಿದೆ. ಆದರೆ ನೀವು ಚೆನ್ನಾಗಿ ವಿಚಾರಮಾಡದೆ ಅಜ್ಞಾತ ಕುಲ ಗೋತ್ರರೊಂದಿಗೆ ಎಂದೂ ಸ್ನೇಹಬೆಳೆಸಬೇಡಿರಿ. ಏಕೆಂದರೆ 'ಅಲ್ಪರ ಸಂಗ ಅಭಿಮಾನ ಭಂಗ' ಎಂದಂತೆ ಅಲ್ಪ ಮನುಜರ ಸಹವಾಸದಿಂದಾಗಿ ಮಾನಕ್ಕೆ ಹಾನಿಯುಂಟಾದೀತು. ಲೋಕದಲ್ಲಿ ಅಮೂಲ್ಯವಾದುದೀ ಮಾನವು. ಆದುದರಿಂದಲೇ 'ಪ್ರಾಣಂ ವಾಪಿ ಪರಿತ್ಯಜ್ಯ ಮಾನಮೇವಾಭಿ ರಕ್ಷತು' ಎಂದಂತೆ ಪ್ರಾಣವನ್ನಾದರೂ ಬಿಟ್ಟು ಮಾನವನ್ನು ಕಾಪಾಡತಕ್ಕದ್ದು. ಮತ್ತು ವ್ಯಾಪಾರಭಾಗದಲ್ಲಿ ಹೆಚ್ಚಾಗಿ ನಷ್ಟವೇ ಕಂಡುಬರುವುದು. ಹೆಚ್ಚಾಗಿ ಗ್ರಹರೆಲ್ಲರೂ ವಿಮುಖರಾಗಿರುವುದರಿಂದ ಪುತ್ರಕಳತ್ರರು ನಿಮಗೆ ವಿಪರೀತವಾಗಿ ವರ್ತಿಸುವರು. ಇದರಿಂದಾಗಿ ನಿಮಗೆ ಸಂಸಾರದಲ್ಲೇ ಜುಗುಪ್ಸೆ ತೋರಿಬಂದೀತು. ಅಂತೂ ಅನಿಷ್ಟ ಪರಂಪರೆಗಳು ಸಮುದ್ರದ ತೆರೆಗಳಂತೆ ಒಂದರ ಹಿಂದೊಂದೆಂಬಂತೆ ಬರುತ್ತಲೇ ಇರುವವು. ಆದರೂ ಗುರ್ವನುಗ್ರಹವಿರುವುದರಿಂದ ಈ ಅನರ್ಥ ಪರಂಪರೆಗಳನ್ನು ದಾಟಲು ದಾರಿ ನಿಮಗೆ ತತ್ಕಾಲದಲ್ಲಿ ತೋರಿಬರುವುದು. ತಾ. ೨೫, ೨೬ ಸ್ವಲ್ಪ ಉತ್ತಮವಿರುವುದು.

**ವೃಷಭ:—**

ಈ ರಾಶಿಯವರಿಗೆ ಈ ವಾರವು ಬಹಳ ಅನುಕೂಲವಿರುವುದು. ನಿರುದ್ಯೋಗಿಗಳಿಗೆ ಇದೊಂದು ಸುಸಂಧಿ. ಈ ವಾರದಲ್ಲಿ ಸರಿಯಾಗಿ ಕೆಲಸ ಮಾಡಿದ್ದಲ್ಲಿ ಯೋಗ್ಯವಾದ ಉದ್ಯೋಗವನ್ನೇ ಹೊಂದುವರು. ಸ್ಪರ್ಧಿಗಳು ಹಗೆಯನ್ನು ತೊರೆದು ಉದಾಸೀನರಾಗುವರು. ಹೆಂಡಿರು ಮಕ್ಕಳೆಲ್ಲರೂ ಅನುಕೂಲರಾಗಿದ್ದು ಸಂಸಾರನೌಕೆಯು ಸುಖವಾಗಿ ಮುಂದರಿಯುವದು. ಆದ ಕಾರಣ ಸಂತೋಷೋನ್ಮತ್ತರಾಗಿ ಹೀಗೆ ತಿಳಿಯಲಿರುವರು. ಜೀವಿತದ ಸಾರವೇ ಸಂಸಾರವು. 'ಸಮ್ಯಕ್ ಸಾರ ಮಸ್ಮಿನ್ನಸ್ತೀತಿ ಸಂಸಾರಃ' ತುಂಬಾ ಸಾರವತ್ತಾದುದರಿಂದಲೇ ಸಂಸಾರವೆಂಬ ಹೆಸರು ಬಂದಿಹುದು ಯುಕ್ತವೇ ಎಂದು. ತಾ. ೨೫, ೨೬, ೨೯, ೩೦, ರಲ್ಲಿ ಸ್ವಲ್ಪ ಜಾಗರೂಕರಾಗಿ ವರ್ತಿಸಬೇಕು. ಕಾರಣ ಈ ತಾರೀಕುಗಳಲ್ಲಿ ಕೊಟ್ಟ ಮಾತನ್ನು ಮೀರುವ ಪ್ರಸಂಗ ಬರಬಹುದು.

**ಮಿಥುನ:—**

ಈ ರಾಶಿಯವರಿಗೆ ಸೌಮ್ಯಗ್ರಹರಾದ ಬುಧ ಗುರು ಶುಕ್ರರು ಇಷ್ಟ ಸ್ಥಾನದಲ್ಲಿದ್ದು ಅನೇಕ ಇಷ್ಟಾರ್ಥವನ್ನು ಕೈಗೂಡಿಸಲು ಶಕ್ಯರಿರುವರು ಆದರೆ ಪಾಪಿಗಳಾದ ಇತರರು ಎಲ್ಲಾ ಅನಿಷ್ಟ ಸ್ಥಾನವನ್ನು ಹೊಂದಿರುವುದರಿಂದ ಎಲ್ಲಾ ವಿಧದಲ್ಲಿಯೂ ವಿಪರೀತವಾಗಿ ಅನಿಷ್ಟವನ್ನೇ ಮಾಡುವರು. ಈ ಯುಗ ಮಹಿಮೆಯಿಂದಾಗಿ ಪಾಪಿಗಳಿಗೆ ಬಲ ಹೆಚ್ಚಿರುವುದು. "ಸಾಹಸವಿದ್ದವರ ಕಾರ್ಯಮೇಲು" ಎಂಬಂತೆ ಈ ಪಾಪಿಗ್ರಹರ ಕಾರ್ಯಗಳೇ ಹೆಚ್ಚಾಗಿ ಅನುಭವಕ್ಕೆ ಬರುವುವು. ತನ್ನ ದುರ್ವ್ಯಸನದಿಂದಾಗಲಿ ಯಾ ರಾಜಕಾರಣದಿಂದಾಗಲಿ ಹಣವು ಖರ್ಚಾಗಿ ಮನಸ್ಸಿಗೆ ಅದೇ ಒಂದು ಚಿಂತೆಯಾಗಿ ಪರಿಣಮಿಸಿ ಯಾವಾಗಲೂ ಉನ್ಮತ್ತರಂತೆ ಇತರರಿಗೆ ಕಾಣಬಹುದು. ಹೀಗಾಗಿ ಮನಸ್ಸಿಗೆ ಎಳ್ಳಷ್ಟೂ ಶಾಂತಿಯಿಲ್ಲದಿರುವುದರಿಂದ ದುಃಖಿಗಳಾಗುವರು. ತಾ. ೨೪, ೨೭, ೨೮ ಈ ದಿನಗಳು ಹೆಚ್ಚಾಗಿ ಅನಿಷ್ಟವಿರುವುದರಿಂದ ಈ ಮೇಲ್ಕಂಡ ದಿನಗಳಲ್ಲಿ ಯಾವುದೊಂದು ವ್ಯಾಪಾರ ವ್ಯವಹಾರಾದಿಗಳಲ್ಲಿ ಕೈಹಾಕಬಾರದು. ಈಶ್ವರ ಮತ್ತು ವಿಷ್ಣು ಸೇವೆಯಿಂದ ಅನಿಷ್ಟಗಳು ಬಹಳ ಕಡಿಮೆಯಾಗುವವು.

**ಕರ್ಕಾಟಕ:—**

ಈ ರಾಶಿಯಲ್ಲಿ ಹುಟ್ಟಿದವರಿಗೆ ಈ ವಾರವು ಬಹಳ ಕೆಟ್ಟದ್ದಿರುವುದು. ಆಪ್ತೇಷ್ಟರುಗಳು ಇವರನ್ನು ತೊಲಗುವರು. ಇದಕ್ಕೆ ಇವರ ಧರ್ಮನಾಶವೇ ಕಾರಣವೆಂದೆನ್ನಬಹುದು. ಯಾಕೆಂದರೆ 'ಶರೀರಮಾದ್ಯಂ ಖಲು ಧರ್ಮಸಾಧನಂ' ಪ್ರತಿಯೊಂದು ಧರ್ಮಕಾರ್ಯವನ್ನು ಆಚರಿಸಲಿಕ್ಕೂ ಶರೀರ ದಾರ್ಢ್ಯವು (ಆರೋಗ್ಯ

ಮತ್ತು ಸಾಮರ್ಥ್ಯ) ಮೂಲ ಕಾರಣವು. ಶತ್ರುಗಳ ಪೀಡೆಯಿಂದಲೂ ಮಾರ್ಗಾಯಾಸದಿಂದಲೂ ಬಳಲಿ ಬೆಂಡಾಗಿ ರೋಗಕ್ಕೆ ತುತ್ತಾಗಿರುವ ಇವರಿಗೆ ಶರೀರದಾರ್ಢ್ಯವೆಲ್ಲಿಯ ಮಾತು. ಆದಕಾರಣ ಆರೋಗ್ಯ ಭಾಗದಲ್ಲಿ ಅತ್ಯಂತ ಜಾಗರೂಕರಾಗಿರತಕ್ಕದ್ದು. ಮಾತ್ರವಲ್ಲದೆ ಯಾವ ಹೊಸ ಕಾರ್ಯವನ್ನೂ ಆರಂಭಿಸಕೂಡದು. ಒಂದು ವೇಳೆ ಕಾರ್ಯದಲ್ಲಿ ಪ್ರವರ್ತಿಸಿದರೆ ಅವೆಲ್ಲವೂ ವಿಪರೀತದಲ್ಲಿ ಪರ್ಯವಸಾನ ಹೊಂದುವುದು ನಿಶ್ಚಯ. ಇದ್ದುದರಲ್ಲಿ ತಾ. ೨೪, ೨೭, ೨೮ ಈ ದಿನಗಳು ಸ್ವಲ್ಪ ಉತ್ತಮವಿರುವವು. ಸಂತೋಷ, ಮಿತ್ರಸಮಾಗಮ.

**ಸಿಂಹ:—**

ಈ ರಾಶಿಯವರಿಗೂ ಕೂಡ ಈ ವಾರವು ಕೆಟ್ಟದೇ ಇರುವುದು. ಯಾವಾಗಲೂ ಪರರಿಗೆ ತೀಕ್ಷ್ಣವಾದ ಮಾತುಗಳನ್ನು ಆಡುವುದರಿಂದಲೂ, ಬಹಳ ಲೋಭತ್ವದಿಂದಲೂ ಮನಸ್ಸಿನಲ್ಲಿ ಇತರರಿಗೆ ಎರಡೆಂಟನ್ನು ಎಣಿಸುವುದರಿಂದಲೂ ಮತ್ತು ಒಬ್ಬೊಬ್ಬರನ್ನು ಒಂದೊಂದು ರೀತಿಯಾಗಿ ಟೀಕಿಸುವುದರಿಂದಲೂ ಇವರ ಕಾರ್ಯಕ್ಕೆ ಎಲ್ಲೆಲ್ಲಿಯೂ ತಡೆಗಳೇ. ಎಲ್ಲರೊಡನೆಯೂ ಕಲಹ, ಅಲ್ಲದೆ ಅವಮಾನ ತಿರಸ್ಕಾರಗಳು ತಪ್ಪಿದ್ದಲ್ಲ. ಆದ ಕಾರಣ ಇವರಿಗೆ ಯಾವದೊಂದು ಸಮೂಹದಲ್ಲೂ ಪ್ರವೇಶವಿಲ್ಲದ್ದರಿಂದ ಬಂಧನದಲ್ಲಿಂದ್ದಂತೆ ಎಲ್ಲಿಗೂ ಹೋಗದೆ ಮನೆಯಲ್ಲೇ ಕುಳಿತುಕೊಳ್ಳುವ ಅವಸ್ಥೆ ಬರುವದು. ಮತ್ತು ಪಿತ್ಥಸಂಬಂಧವಾದ ರೋಗವು ತಲೆದೋರುವುದು, ಅಂತೂ ಆರೋಗ್ಯವು ಕೆಟ್ಟು ಅತ್ಯಂತ ದುಃಖವನ್ನುಂಟು ಮಾಡುವುದು. ತಾ. ೨೭, ೨೮ ಈ ಎರಡು ದಿನಗಳು ಬಹಳ ಕೆಟ್ಟದ್ದಿರುವುವು ಈ ದಿನಗಳಲ್ಲಿ ಶರೀರದಲ್ಲಿರತಕ್ಕ ಪೀಡೆಯು ಹೆಚ್ಚಾಗಲಿದೆ.

**ಕನ್ಯಾ:—**

ಇಷ್ಟಾನಿಷ್ಟ ಗ್ರಹರು ಸಮಬಲರಾಗಿರುವುದರಿಂದ ಇವರಿಗೆ ಈ ವಾರದಲ್ಲಿ ಅಷ್ಟೊಂದು ವಿಶೇಷ ಒಳ್ಳೆದೂ ವಾ ಕೆಟ್ಟದೂ ಆಗಲಾರದು. ಅಂತೂ ಮುಂಚೆ ಇರತಕ್ಕ ಸ್ಥಿತಿಗೆ ಏನೊಂದೂ ಕೆಡಕು ಆಗಲಾರದು. ಆದರೂ ಕೈಗೊಂಡ ಕಾರ್ಯವನ್ನು ಕೊನೆಗಾಣಿಸುವ ಶಕ್ತಿಯೊಂದು ವಿಶೇಷವಾಗಿರುವುದು ಶತ್ರುಗಳು ತಾವಾಗಿಯೇ ಮಿತ್ರರಾಗುವರು. ಆದರೂ ಕಾರಣಾಂತರದಿಂದ ನಿಂತಲ್ಲಿ ನಿಲ್ಲದೆ ಏನೊಂದು ಉದ್ದೇಶ ಸಾಫಲ್ಯವಿಲ್ಲದೆ ಅಲೆಯುತ್ತಾ ಇರುವದೊಂದೆ ಸ್ವಭಾವವು ಕಂಡು ಬರಬಹುದು. ಇದರಿಂದಾಗಿ ಏನೊಂದೂ ಅಪಾಯ ಸಂಭವಿಸುವ ಕಾರಣವಿಲ್ಲ. ತಾ. ೨೫ರಿಂದ ೨೮ರ ವರೆಗೆ ತುಂಬಾ ಅನುಕೂಲವೇ ಇಷ್ಟ ಸಿದ್ಧಿ, ನಾನಾ ವಿಧ ಲಾಭ, ಸಂತೋಷ.

**ತುಲಾ:—**

ಈ ವಾರವು ಈ ರಾಶಿಯವರಿಗೆ ಅತ್ಯುತ್ಕೃಷ್ಟವಿರುವುದೆಂದರದು ಅತಿಶಯೋಕ್ತಿಯಾಗಲಾರದು. ಸುಮುಖರಾದ ಸಕಲ ಗ್ರಹರೂ ಇಷ್ಟಾರ್ಥಪೂರ್ತಿಯಲ್ಲಿ ನಾನು ಮುಂದೆ ನಾನು ಮುಂದೆ ಎನ್ನುತ್ತಿರುವರು. ಆದ್ದರಿಂದ ಅಲ್ಪ ಖರ್ಚಿನಿಂದ ಅಧಿಕ ಲಾಭವನ್ನು ಹೊಂದುವರು. ಎಲ್ಲರಿಂದಲೂ ಗೌರವಿಸಲ್ಪಡುವರು. ಮಾತ್ರವಲ್ಲ. ಇತರರು ಇವರ ವಾಕ್ಯವನ್ನು ರಾಜಾಜ್ಞೆಯಂತೆ ಅನುಸರಿಸುವರು. ದೊಡ್ಡ ದೊಡ್ಡ ಸತ್ಫಲಗಳನ್ನೀಯುವ ಕಾರ್ಯಗಳನ್ನು ಈ ವಾರದಲ್ಲೇ ಕೈಗೊಂಡಲ್ಲದು ನಿರ್ವಿಘ್ನದಿಂದ ಇವರು ಎಣಿಸಿದಕ್ಕೂ ಮಿಗಿಲಾಗಿ ಶ್ರೇಯಸ್ಕರವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲವು. ಈ ರಾಶಿಯವರಿಗೆ ಯಾವ ಭಾಗದಲ್ಲಿಯೂ ಯಾವ ವಿಧದಿಂದಲೂ ಕೊರತೆಯಿಲ್ಲದ ಕಾರಣ ಇವರು ಧನ್ಯರೇ ಸರಿ. ತಾ. ೨೭ರಿಂದ೩೦ರ ವರೆಗಿನ ದಿನಗಳು ಅಮೂಲ್ಯವಾದವುಗಳು.

**ವೃಶ್ಚಿಕ:—**

ಈ ರಾಶಿಯವರಿಗೆ ಅತ್ಯಂತ ಕೆಟ್ಟದ್ದಿರುವುದೀ ವಾರವು. ಬುಧ ಮತ್ತು ತಾ. ೨೪, ೨೯, ೩೦ರ ಚಂದ್ರ, ಇವರ ಹೊರತು ಬಾಕಿ ಎಲ್ಲರೂ ಇವರ ಕೇಡನ್ನು ಬಯಸುವವರೇ. ಆದುದರಿಂದಲೇ ಇವರಿಗೆ ಪೀಡೆಯನ್ನು ಕೊಡಲೋಸುಗ ಇವರನ್ನನುಸರಿಸಿ ಕೊಂಡೇ ಸಮಯವನ್ನೇ ಹೊಂಚು ಹಾಕುತ್ತಿರುವರೀ ವಾರ ಶತ್ರುಗಳು. ಕಾಸು ಇಲ್ಲದ ನರ ಕಲ್ಲಿಗೆ ಸಮನೆಂಬಂತೆ ಕಲ್ಲಿಗೆ ಸಮಾನರಾಗುವರು. ಹಣ ಬೇಕಾದಷ್ಟಿರುವಾಗ ಬಂಧುಗಳು ಬಾಂಧವರು ಮಿತ್ರರು ಪತ್ನಿಪುತ್ರರೆಲ್ಲರೂ ಇರುವರು. ತಾನು ರಿಕ್ತಹಸ್ತನಾದಾಗ ಮಿತ್ರರು ತೇಲಿ ಹೋಗುವರು. ಬಂಧುಗಳು ಕಣ್ಣೆತ್ತಿ ನೋಡರು, ಪತ್ನಿ ಪುತ್ರರೂ ತಮ್ಮ ಒಡಲ ಬೇಗೆಗಾಗಿ ಸುತ್ತಲಿಂದಲೂ ಎಳೆವರು. ಅಂತೆಯೇ ಇವರ ಅವಸ್ಥೆ, ಇದಕ್ಕಿಂದ ಹೆಚ್ಚಿನ ಚಿಂತೆ ಬೇರುಂಟೇ?ಆದ ಕಾರಣದಿಂದಲೇ ಆರ್ಯರು ಒಂದು ಶ್ಲೋಕದಲ್ಲಿ ಹೀಗೆಂದಿರು

ವರು. ‘‘ಚಿಂತಾ ಯಶ್ಚ ಚಿತಾಯಶ್ಚ ಒಂದು ಮಾತ್ರ ವಿಶೇಷಣಂ। ಚಿತಾ ದಹತಿ ನಿರ್ಜೀವಂ ಚಿಂತಾ ದಹತಿ ಜೀವಿನಂ’’ ಎಂದು. ಅಂದರೆ ಚಿಂತೆಗೂ ಚಿತೆಗೂ ಒಂದು ಬಿಂದು (ಸೊನ್ನೆ) ಮಾತ್ರ ಅಭ್ಯಂತರವು. ಚಿತೆಯು ಹೆಣವನ್ನು ಸುಡುವುದು, ಚಿಂತೆಯು ಜೀವಂತನನ್ನೇ ಸುಡುವುದು. ಕಾರಣವಿಷ್ಟೇ. ಚಿಂತೆಗೂ ಈ ಜೀವಿತ ಚಿಂತಾಯುಕ್ತ ಮನುಜನಿಗೂ ನಿಕಟಸಂಬಂಧವಿದೆ. ಏನಂದರೆ ಚಿಂತೆಯಲ್ಲೊಂದು ಸೊನ್ನೆ ಇದೆ. ಈತನಲ್ಲಿ ಎಲ್ಲವೂ ಸೊನ್ನೆಯೇ. ಅಂದರೆ ಏನೂ ಇಲ್ಲವೆಂದು. ಆದ ಕಾರಣ ಈತನು ಜೀವನ್ಮೃತನಂತಿರುವನು.

**ಧನು:—**

ಈ ವಾರವು ಇವರಿಗೂ ಒಳ್ಳೆಯದಿಲ್ಲವು. ಇವರ ಮನಸ್ಸು ಯಾವಾಗಲೂ ವಕ್ರವಾಗಿದ್ದು ವಕ್ರಮಾರ್ಗದಲ್ಲೇ ಮುಂದರಿಯುವುದು. ಆದ್ದರಿಂದ ಇವರ ಬಂಧುಮಿತ್ರರಿಗೆ ಇವರ ದಾರಿಯು ಸರಿದೋರದು. ಇದರಿಂದಾಗಿ ಸ್ಥಾನಗೌರವಗಳು ನಾಶವಾಗುವವು. ಶರೀರದಲ್ಲಿ ಕಾಸರೋಗದ ಪೀಡೆಯು ಆಗುವುದು. ನೇತ್ರರೋಗವೂ ಉತ್ಪನ್ನವಾಗುವುದು. ವ್ಯಾಪಾರದಲ್ಲೂ ವ್ಯವಹಾರದಲ್ಲೂ ಕೂಡಾ ಆಯಕ್ಕಿಂತ ವ್ಯಯವೇ ಹೆಚ್ಚಾಗಿ ಸಾಲಿಗರಿಂದ ಪೀಡಿಸಿಕೊಳ್ಳಲ್ಪಡುವರು. ಸ್ವಪ್ನದಲ್ಲೂ ಎಣಿಸದ ವಿಘ್ನಗಳು ಇವರ ಪ್ರತಿಯೊಂದು ಕಾರ್ಯದಲ್ಲೂ ಮುಂದಾಗಿ ಬರುವವು. ‘ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ’ ಎಂದಂತೆ ತಾನು ಮಾಡಿದ ಶುಭಾಶುಭ ಕರ್ಮಗಳ ಫಲಗಳನ್ನು ತಾನು ಅನುಭವಿಸಿಯೇ ತೀರಬೇಕು. ಅನ್ಯಥಾ ಗತ್ಯಂತರವಿಲ್ಲವು.

**ಮಕರ —**

ಹೆಚ್ಚಿನ ಭಾಗದಲ್ಲಿ ಈ ರಾಶಿಯವರಿಗೆ ಈ ವಾರವು ಉತ್ತಮವಿರುವುದು. ಎಲ್ಲಾ ಭಾಗದಲ್ಲೂ ಧನಲಾಭವಾಗುವುದು. ನಿರೋಗಿಯಾಗಿರುವನು. ಮಾತ್ರವಲ್ಲದೆ ಶತ್ರುಗಳಿಗಿಂತ ದುರ್ಬಲನಾದರೂ ಶತ್ರುಗಳೇ ಇವನಿಗೆ ಶರಣಾಗತರಾಗುವರು. ಸಂಪತ್ತಿನಿಂದ ಗೂಡಿದ ಸ್ತ್ರೀಯು ಲಾಭವಾಗುವ ಸಂಭವವಿದೆ. ಕೈಗೊಂಡ ಕಾರ್ಯಗಳು ನಿರ್ವಿಘ್ನದಿಂದ ಕೊನೆಗಾಣುವುವು. ರಾಜಕೀಯ ಕ್ಷೇತ್ರದಲ್ಲಿ ಜಯವಾಗುವುದು. ತಾ. ೨೫ರಿಂದ ೨೮ರ ವರೆಗಿನ ದಿನಗಳು ಉತ್ತಮವಿರುವವು. ಗೌರವ, ಮನಶ್ಶಾಂತಿ, ಧನಲಾಭ, ಇತರ ದಿನಗಳಲ್ಲಿ ಆನಿಷ್ಟ ಶೋಕಗಳುಂಟಾಗಲಿವೆ. ಆದ ಕಾರಣ ಸ್ವಲ್ಪ ಎಚ್ಚರಿಕೆಯಿಂದಿರಬೇಕು.

**ಕುಂಭ:—**

ಎಷ್ಟು ಜಾಗರೂಕತೆಯಿಂದ ವ್ಯವಹಾರ ಮಾಡಿದರೂ ನಿಮಗೆ ವಿಜಾತೀಯರಲ್ಲಿ ಕಲಹವುಂಟಾಗಿಯೇ ತೀರುವುದು. ವ್ಯವಹಾರದಲ್ಲಾಗಲಿ ಇತರ ಯಾವ ಭಾಗದಲ್ಲೇ ಆಗಲಿ ಓರ್ವ ಸ್ತ್ರೀಯಿಂದಾಗಿ ನಿಮಗೆ ಸ್ವಲ್ಪ ಅನಿಷ್ಟವಾಗುವುದಿದೆ. ಶರೀರದಲ್ಲುಂಟಾಗ ಪೀಡೆಯಿಂದ ಅತ್ಯಂತ ದುಃಖವಾಗುವುದು. ತದ್ರೂಪವಾಗಿ ಧನವನ್ನು ಕೂಡ ವ್ಯಯಿಸುವಿರಿ. ಇದರಿಂದ ದೇಹಕಾಂತಿಯು ನಾಶವಾಗುವುದಲ್ಲದೆ ದೇಹವು ಕ್ಷೀಣವಾಗಿ ದುರ್ಬಲವಾಗುವುದು. ಆದರೂ ಕ್ಷತ್ರಿಗ್ರಹರಾದ ರವಿ ಕುಜರು ಅನುಕೂಲರಿರುವುದರಿಂದ ಪೂರ್ವೋಕ್ತ ಅನಿಷ್ಟಗಳು ಕೆಲವು ಕಾರ್ಯರೂಪಕ್ಕೆ ಬರಲಾರವು. ಏಕೆಂದರೆ ರಾಜಾಜ್ಞೆಯನ್ನು ಸರ್ವರೂ ಮನ್ನಿಸತಕ್ಕದ್ದಷ್ಟೆ. ತಾ. ೨೭ರಿಂದ ೩೦ರ ವರೆಗಿನ ದಿನಗಳು ಸ್ವಲ್ಪ ಶುಭ, ಸುಖ, ಮಾನ, ಧನಾಪ್ತಿ.

**ಮೀನ:—**

ಈ ವಾರದಲ್ಲಿ ಈ ರಾಶಿಯವರು ಎಷ್ಟು ಮಿತಾಹಾರ ಮತ್ತು ಜಾಗ್ರತೆಯಲ್ಲಿದ್ದರೂ ಆರೋಗ್ಯವು ಕೆಡುವುದು. ಶತ್ರುಗಳಿಂದಲೂ ಕೂಡ ಕಷ್ಟ ಸಂಭವಿಸುವದು. ಮಾತ್ರವಲ್ಲ ಎಲ್ಲರಿಗೂ ತಲೆಬಾಗಿ ನಡೆಯುವ ಪ್ರಸಂಗ ಬರುವುದು. ಎಲ್ಲಾ ಕಡೆಗಳಲ್ಲೂ ಎಲ್ಲಾ ವ್ಯವಹಾರಗಳಲ್ಲೂ ಅಪಜಯವೇ ಫಲವಾಗಿ ಸಿಗುವುದು. ಆದಕಾರಣ ಇವರು ‘‘ಉಪಾಯೇನ ಹಿ ಯಚ್ಛಕ್ಯಂ ನಾ ತಚ್ಛಕ್ಯಂ ಪರಾಕ್ರಮೈಃ’’। ಉಪಾಯದಿಂದಲೇ ತಮ್ಮ ಕಾರ್ಯಗಳಿಂದಾಗಲಿ ಶತ್ರುಗಳಿಂದಾಗಲಿ ಪಾರಾಗಬೇಕಲ್ಲದೆ ಬೇರಾವ ಮಾರ್ಗವೂ ಇಲ್ಲವು. ಈ ಯುಕ್ತಿಯಿಂದಲೇ ತಮ್ಮ ಇಷ್ಟಾರ್ಥಗಳನ್ನೆಲ್ಲಾ ಸಿದ್ಧಿಸಿಕೊಳ್ಳಲನುಕೂಲವಿದೆ—ತಾ. ೨೫ರಿಂದ ೨೮ರ ವರೆಗೆ ಸ್ವಲ್ಪ ಎಚ್ಚರಿಕೆಯಿಂದಿರಬೇಕು. ಆರೋಗ್ಯ ಕೆಡುವ ದಿನಗಳಿವೆ.

**—ಬಾಲಭಾಸ್ಕರ**

# ಸೊಳ್ಳೆಗಳ ಮೇಲೂ ಸರ್ವಾಧಿಕಾರ!

## ಇಟಲಿಯಲ್ಲಿ ಕ್ರಿಮಿಸಂಹಾರ ಚಳವಳವು ಪ್ರಾರಂಭವಾಯಿತು.

### ವೈಜ್ಞಾನಿಕ ಸೀನರ್ ಬುಡಿನಿಯ ವಿಚಿತ್ರ ಶೋಧನೆ!

**ಇಟಲಿಯಲ್ಲಿ ಚಳವಳವು ಪ್ರಾರಂಭವಾಯಿತು.**

ಸೀನರ್ ಮುಸ್ಸೋಲಿನಿಯು ತನ್ನ ದೇಶದಲ್ಲಿ ಎಲ್ಲಾ ಪ್ರಾಣಿಗಳ ಮೇಲೆ ಅಧಿಕಾರ ನಡೆಸಲು ತೊಡಗಿದ್ದಾನೆ. ಇತ್ತೀಚೆಗೆ ಇಟಲಿಯಲ್ಲಿ ಪ್ರಾರಂಭವಾದ ಚಳವಳವು ಸ್ವಾರಸ್ಯದ ಸಂಗತಿಯಾಗಿದೆ.

**ಸೊಳ್ಳೆಗಳ ಕೊಳ್ಳೆ.**

ಸೀನರ್ ಬುಡಿನಿ ಎಂಬ ವೈಜ್ಞಾನಿಕನು ಸೊಳ್ಳೆಗಳ ವಿನಾಶಕ್ಕಾಗಿ ಹೊಸತೊಂದು ವಿಧಾನವನ್ನು ಕಂಡುಹಿಡಿದಿದ್ದಾನೆ. ಈ ಮಹಾಶಯನು ಫೆರಾರದಲ್ಲಿರುವ ತನ್ನ ಮನೆಯ ಬಳಿಯಲ್ಲಿಯೆ ಪಕ್ಷಿಗಳ ಒಂದು ಕೂಟವನ್ನು ಸಾಕುತ್ತಿದ್ದಾನೆ. ಈ ಪಕ್ಷಿಗಳ ಕೆಲಸವೆಂದರೆ ಸೊಳ್ಳೆಗಳ ಕೊಳ್ಳೆಯಾಡುವುದು.

**ಪಕ್ಷಿರಾಜ**

ಈ ಪಕ್ಷಿರಾಜನು ಚಿಕ್ಕ ಹಕ್ಕಿಗಳನ್ನು ಗೂಡುಗಳಿಂದ ತಂದು ಅವುಗಳಿಗೆ ಆವೆಮಣ್ಣು ಮತ್ತು ಹುಲ್ಲಿನ ಕೃತಕ ಗೂಡುಗಳನ್ನು ಮಾಡಿಕೊಡುತ್ತಾನೆ. ಪಕ್ಷಿಗಳಿಗೆ ಹಾಲು ಮತ್ತು ಕ್ರಿಮಿಗಳನ್ನು ಸೇರಿಸಿ ತಯಾರಿಸಿದ ಒಂದು ಅಂಟಿನ ಆಹಾರವನ್ನು ಕೊಡುತ್ತಾನೆ. ಈ ಆಹಾರವನ್ನು ತಯಾರಿಸಲು ಬುಡಿನಿಯ ತುಂಬಾ ಶೋಧನೆಗಳನ್ನು ಮಾಡಿರುವನಂತೆ.

**ಕ್ರಿಮಿಬೇಟೆ**

ಈ ಪಕ್ಷಿಗಳು ಬುಡಿನಿಯ ಮನೆಯ ಸುತ್ತಲೂ ಹಾರಾಡಿ ಎಲ್ಲಾ ಕ್ರಿಮಿಗಳನ್ನು ನುಂಗಿ ಬಿಡುತ್ತವೆ ಇದರಿಂದಾಗಿ ಅವನ ಮನೆಯಲ್ಲಿ ಸೊಳ್ಳೆಗಳ ಕಾಟವೇ ಇಲ್ಲದಂತಾಗಿದೆ. ಈ ತರದ ಚಟುವಟಿಕೆಗಳು ಎರಡು ಮೂರು ಜಿಲ್ಲೆಗಳಲ್ಲಿ ಯಶಸ್ವಿಯಾಗಿ ಕಂಡುಬಂದಿರುತ್ತವೆ.



ಈ ಚಳವಳಕ್ಕೆ ಮುಸ್ಸೋಲಿನಿಯು ತನ್ನ ಆಶೀರ್ವಾದ ಕೊಟ್ಟಿದ್ದಾನೆ.

**ಎಬಿಸೀನಿಯದ ಮೇಲೆ ಪಕ್ಷಿಗಳ ಧಾಳಿ**

ಈ ಪಕ್ಷಿಗಳು ಇಟಲಿಯ ಕ್ರಿಮಿಗಳನ್ನು ನುಂಗುವುದರಲ್ಲಿ ತೃಪ್ತಿ ಹೊಂದದೆ ತಮ್ಮ ದೊರೆಯ ಅಪ್ಪಣೆಯಂತೆ ಎಬಿಸೀನಿಯಕ್ಕೆ ಹೋಗಿ ಅಲ್ಲಿ ನುಸಿ ಬೇಟೆ ಮಾಡಿ ಪುನಃ ಇಟಲಿಗೆ ಹಿಂತಿರುಗಿ ಬರುತ್ತವೆ.

**ಇಟಲಿಯ ಹೊಸ ಯತ್ನ**

ಈ ಶೋಧನೆಯ ಕುರಿತು ಸರಕಾರವು ತಿಳಿದು ಸೊಳ್ಳೆಗಳ ನಾಶಕ್ಕಾಗಿ ದೊಡ್ಡ ಚಳವಳವನ್ನು ಹೂಡಿದೆ. ನೀರು ನಿಲ್ಲುವ ಹೊಂಡಗಳು ಮುಚ್ಚಲ್ಪಡುತ್ತಿವೆ. ಆದರೆ ಮುಚ್ಚಲಾಗದ ಕೆಲವು ಹೊಂಡಗಳಿವೆಯಂತೆ. ಅಂತಹ ಸ್ಥಳಗಳಿಗೆ ಬುಡಿನಿ ಪಕ್ಷಿರಾಜನ ಸೈನ್ಯವು ಹೋಗಿ ನುಸಿಗಳ ಸೈನ್ಯವನ್ನು ನಾಶಮಾಡಿಬಿಡುತ್ತವೆ.

**ಸೈನಿಕ ಶಿಕ್ಷಣ**

ಈ ಪಕ್ಷಿಸೈನ್ಯಕ್ಕೆ ಹೊಸ ಪಕ್ಷಿಗಳು ಸೇರ ಬೇಕಾದರೆ ಇಪ್ಪತ್ತು ದಿವಸಗಳ ಅಭ್ಯಾಸವು ಬೇಕಾಗುತ್ತದೆ. ಚಿಕ್ಕ ಪಕ್ಷಿಗಳು ನಿಜವಾದ ಪಕ್ಷಿ ಸೈನಿಕರಂತಾಗಬೇಕಾದರೆ ಸುಮಾರು ೧೩೪೪೦೦ ನುಸಿಗಳನ್ನು ಅವುಗಳ ತಂದೆತಾಯಿಗಳು ತಿನ್ನಿಸುತ್ತವೆಯೆಂದು ಬುಡಿನಿಯ ಗಣನೆ.

ಸೀನರ್ ಬುಡಿನಿಯು ಕ್ಯಾಸ್ಟೆಲ್ ಫುಸಾನೊ ಒರ್ನಿತೊಲಾಜಿಕಲ್ ಶೋಧನಾಲಯದ ರಾಜಕುಮಾರ ಚಿಗಿಯವರೊಂದಿಗೆ ತನ್ನ ಕೆಲಸವನ್ನು ಪ್ರಾರಂಭಿಸಿದನಂತೆ. ಈಗ ಈ ವೈಜ್ಞಾನಿಕನೊಡನೆ ೨೦೦ ಪಕ್ಷಿಗಳ ಚತುರ ಸೈನ್ಯವಿದೆ.

# ಹೊಳೆಯುವುದೆಲ್ಲಾ ಚಿನ್ನವೆ?

## ಜಾಹಿರಾತುದಾರರು ಹೇಗೆ . . . . ಏಕೆ ಹಣ ಕೊಡುವರು?





ಬರೆದವರು:
*ಅಜ್ಞಾತ*

✢

ಪತ್ರಿಕೆಗಳಲ್ಲಿ ತುಂಬ ಜಾಹಿರಾತುಗಳಿದ್ದರೆ ಅದರ ಸಡಗರವೇ ಬೇರೆ– ಅದು ಓದುಗರ ಮೇಲೆ ಮಾಡುವ ಪರಿಣಾಮವೇ ಬೇರೆ.

"ಈ ಪತ್ರಿಕೆಗೆ ತುಂಬ ಜಾಹಿರಾತುಗಳಿವೆಯಯ್ಯ. ಒಳ್ಳೆ ಕೆಲಸಮಾಡುತ್ತಾರೆ. ಹೆಚ್ಚು ಲಾಭವಿರಬೇಕು. ಫಕ್ಕನೆ ಸಾಯಲಿಕ್ಕಿಲ್ಲ."

ಇದು ಓದುಗರ ಮನಸ್ಸಿನ ಮೇಲೆ ಮೊತ್ತಮೊದಲು ಅಂಕುರಿಸುವ ವಿಚಾರ. ಫಕ್ಕನೆ ಸಾಯದ ಪತ್ರಿಕೆಗಳಾದರೆ ಒಂದೆರಡಾಣೆ ಕೊಟ್ಟು ಕೊಂಡು ಕೊಳ್ಳುವಾ ಎನಿಸುತ್ತದೆ. ಸಾಯುವ ವಸ್ತು ಎಷ್ಟು ಒಳ್ಳೆಯದಾದರೂ ಯಾರಿಗೆ ಬೇಕು?

ಆದರೆ ಅದರ ಕತೆಯೇ ಬೇರೆ. ಅರ್ಧ ಪತ್ರಿಕೆ ತುಂಬ ಜಾಹಿರಾತುಗಳಿರುವ ಪತ್ರಿಕೆಗಳು ಕೆಲವು ಹೇಳದೆ ಕೇಳದೆ ಒಂದು ದಿನ ಬೆಳಗ್ಗೆ ಅಪ್ಪಣೆ ತೆಗೆದುಕೊಳ್ಳುವುದಿದೆ.

ಪತ್ರಿಕೆಯ ಮೊದಲ ಸಂಚಿಕೆಗೇ ಒಬ್ಬರು ಜಾಹಿರಾತು ಕಳುಹಿಸುತ್ತಾರೆ. ಆರು ತಿಂಗಳ ನಂತರ ಹಣ ಕೇಳಿದರೆ ಉತ್ತರವೇ ಇಲ್ಲ.

ooo

ಒಬ್ಬರು ಅರವತ್ತು ರೂಪಾಯಿಯ ಜಾಹಿರಾತಿನ ಬಿಲ್ಲಿಗೆ ಒಂದು ಕುಡ್ತೆ ಗಂಗಾತೀರ್ಥವನ್ನು ಕಾಶಿಯಿಂದ ಕಳುಹಿಸಿರುತ್ತಾರೆ.

ooo

ಇನ್ನೊಬ್ಬರು ಜಾಹಿರಾತಿನ ಹಣವನ್ನು ಕೊಡಲಿಲ್ಲವೆಂಬ ಸಿಟ್ಟಗಾಗಿ ದೊಡ್ಡ ವಿ. ಪಿ. ತರಿಸಿ ತಿರಸ್ಕರಿಸಬೇಕಾಯಿತು.

* * *

ಮೂರು ವರ್ಷಗಳ ಕೆಳಗೆ ನಾನು "ಸಾಹಿತ್ಯ ಸಾಮ್ರಾಟ್" ಎಂಬ ಪತ್ರಿಕೆಯನ್ನು ಹೊರಡಿಸಿದೆ. ಈ ಸಾಮ್ರಾಟನ ರಾಜಭಂಡಾರವು ಒಂದೂವರೆ ವರ್ಷದಲ್ಲಿ ಖಾಲಿಯಾಗಿ ಕೊನೆಗೆ ಲಾಭ ನಷ್ಟದ ತಖ್ತೆಯನ್ನು ತೆಗೆದಾಗ ರೂ. ೧೭೧೧-೧೧-೧೧ ಐನ್ ಲುಕ್ಸಾನು ಆಗಿದೆಯೆಂದು ತಿಳಿದು ಬಂತು. ನಾನು ಸಮತಾವಾದಿಯಾದ್ದರಿಂದ ಈ ನಷ್ಟವನ್ನು ಈ ಕೆಳಗಿನ ಪಟ್ಟಿಯಂತೆ ಹಂಚಿದೆ:

೧. ಧನಲಕ್ಷ್ಮೀ ಪ್ರೆಸ್ಸಿಗೆ ಮುದ್ರಣ ವೆಚ್ಚದ ಬಾಕಿಯ ರೂಪದಲ್ಲಿ ೧೦೦೧-೧೦-೧೧

೨. ವಿಶ್ವಭಾರತೀ ಸ್ಟೇಶನರಿ ಮಾರ್ಟಿಗೆ: ಕಾಗದದ ಬಿಲ್ಲಿನ ಬಾಕಿ ೫೭೯-೬-೩

೩. ನನ್ನ ಆಫೀಸ್ ಕಟ್ಟೋಣದ ಯಜಮಾನನಿಗೆ ಬಾಡಿಗೆ ಬಾಕಿ ೧೦೮-೦-೦

೪. ನನ್ನ ಧರ್ಮ ಪತ್ನಿ ಸುಶೀಲೆಗೆ ಅವಳ ಆಭರಣಗಳನ್ನು ಅಡವಿಟ್ಟು ಬಿಡಿಸಿಕೊಳ್ಳದ್ದರಿಂದ (ಮಜೂರಿ ಕೂಡಿ) ೭೨-೧೦-೯

ಈ ಪೈಕಿ ನಾಲ್ಕನೆಯವಳಾದ ನನ್ನ ಧರ್ಮ ಪತ್ನಿಯು ಈ ನಷ್ಟವನ್ನು ತನ್ನ ತಂದೆಯ ಹೆಸರಿಗೆ "ಎಂಡೋರ್ಸ್" ಮಾಡಿಕೊಟ್ಟು ಆ ಹಣದಿಂದ ತನ್ನ ಆಭರಣಗಳನ್ನು ಬಿಡಿಸಿಕೊಂಡಳು. ಉಳಿದ ಮೂವರು ಕೈತೊಳೆದುಕೊಂಡು ನನ್ನ ಬೆನ್ನು ಹತ್ತಿದ್ದರಿಂದ ನಾನು ಅವರಿಗೆ ತೊಂದರೆ ಕೊಡಬಾರದೆಂಬ ಉದ್ದೇಶದಿಂದ ಸೀದಾ ಮೈಸೂರಿಗೆ–

ಸಾಯಲಿ. ಈ ಪುರಾಣ ಎಲ್ಲ ಹೇಳಿ ಈಗ ಏನಾಗಬೇಕು? ಇದರಿಂದ ಈ ಕೆಳಗಿನವರಿಗೆ ಈ ಕೆಳಗಿನ ಹೊಸ ಅನುಭವಗಳು ಬಂದು ಆದ ನಷ್ಟ ಭರ್ತಿಯಾಯಿತೆನ್ನುವಾ.

1. ಪ್ರೆಸ್ಸಿನ ಮಾಲಕರಿಗೆ– ಹುಚ್ಚರಿಗೆ ಕಡಕೊಡಬಾರದೆಂಬುದು.

2. ಸ್ಟೇಶನರಿ ಮಾರ್ಟನವರಿಗೆ-ಇದ್ದ ಕಾಗದವನ್ನು ಕಡ ಕೊಟ್ಟರೆ ಕಾಗದ ಕಂಪೆನಿಯವರ ಹುಂಡಿ ಬರುವಾಗ ಕೈಕಡಕ್ಕಾಗಿ ಬಿಸಿಲಲ್ಲಿ ತಿರುಗಾಡಬೇಕಾಗುವುದೆಂದು.

3. ಆಫೀಸು ಕಟ್ಟೋಣದ ಮಾಲಿಕರಿಗೆ-ಬಾಡಿಗೆಯ ಆಸೆಗೆ ಕಟ್ಟೋಣವನ್ನು ಇನ್ನೊಬ್ಬರ ವಶಕೊಟ್ಟರೆ ರಿಪೇರಿ ಚಾರ್ಜನ್ನು ಕೈಯಿಂದ ಕೊಡಬೇಕೆಂದು.

4. ನನ್ನ ಹೆಂಡತಿಗೆ–ಗಂಡನೆಂದು ಮಮತೆಯಿಟ್ಟರೆ ಬಿಕ್ಕೆ ಬೇಡಲಿಕ್ಕೆ ಹೋಗಬೇಕಾಗುವುದೆಂದು.

5. ನನಗೆ-ಒಂದು ಕೆಲಸದ ಗುಣಾವಗುಣಗಳನ್ನು

ನಿರ್ಣಯಿಸುವುದು ಅದರ ಉದ್ದೇಶದ ಆಧಾರದಿಂದಲ್ಲ; ಫಲದ ಆಧಾರದಿಂದ ಎಂದು; ಮತ್ತು ಎಲ್ಲ ಜಾಹಿರಾತು ದಾರರೂ ಹಣ ಕೊಡುವವರಲ್ಲವೆಂದು.

ಈಗ ನಾನು ಹೇಳುವುದು ಜಾಹಿರಾತುದಾರರ ವಿಷಯ—

* * *

ನೀವು ಪತ್ರಿಕೆಯನ್ನು ಹೊರಡಿಸುವ ಸಂಕಲ್ಪ ಮಾಡಿ ನಿಮ್ಮ ಜಾಹಿರಾತಿನ ದರಗಳನ್ನು ಮುದ್ರಿಸಿ ಕೆಲವರು ದೊಡ್ಡ ವ್ಯಾಪಾರಿಗಳಿಗೆ ಕಳಿಸುತ್ತೀರಿ. ಹೀಗೆ ಕಳಿಸಿ ದೊಡನೆ ಅವರೇನು ಜಾಹಿರಾತು ಕಳಿಸುತ್ತಾರೆಯೇ? ಎಷ್ಟು ಬಾರಿ ನೆನಪು ಹುಟ್ಟಿಸಬೇಕು, ಎಷ್ಟು ಬಾರಿ ಕಂಟ್ರಾಕ್ಟಿನ ದರಗಳನ್ನು ಕಡಿಮೆ ಮಾಡಬೇಕು!

ಹೀಗೆ ನೀವು ಕರಪತ್ರಗಳನ್ನು ಕಳಿಸಿ ಏನೂ ಸಿಗುವ ಭರವಸೆಯಿಲ್ಲದೆ ಕುಳಿತಿರುವಾಗ ನಿಮ್ಮ ಮೊದಲ ಸಂಚಿಕೆಗೇ ಅರ್ಧ ಪುಟದ ಜಾಹೀರಾತು ಅಪ್ರಾರ್ಥಿತವಾಗಿಯೇ ಬಂದರೆ ನಿಮಗೆಷ್ಟು ಸಂತೋಷವಾಗಲಿಕ್ಕಿಲ್ಲ!

ಆಸೆಯಿಂದ ಎದುರು ನೋಡುತ್ತಿರುವಾಗ ಭಾರವಾದ ಒಂದು ಲಕ್ಕೋಟೆಯೂ ಒಂದು ಚಿಕ್ಕ ಪಾರ್ಸೆಲೂ ನಿಮಗೆ ಟಪ್ಪಾಲಿನಿಂದ ಬರುತ್ತದೆ. ನೀವು ಉತ್ಕಂಠೆಯಿಂದ ಲಕ್ಕೋಟೆಯನ್ನು ಹರಿದು ಒಳಗೇನಿದೆಯೆಂದು ನೋಡುತ್ತೀರಿ. ಒಳಗೆ ಒಂದು ಮುದ್ರಿತವಾದ ಕಾಗದವೂ ಜಾಹಿರಾತಿನ ವಸ್ತುವೂ ಇರುತ್ತದೆ. ನೋಡುತ್ತೀರಿ-ನೀವು ನಿಮ್ಮ ಕರಪತ್ರವನ್ನು ಕಳಿಸದಿದ್ದವರೊಬ್ಬರು ನಿಮಗೆ ಜಾಹಿರಾತನ್ನು ಕಳಿಸಿದ್ದಾರೆ. ಅವರ ಜಾಹಿರಾತಿನಲ್ಲಿರಿಸತಕ್ಕ ಬ್ಲಾಕು ಬೇರೆ ಬಂದಿದೆ. ಹಾಗಾದರೆ ಪತ್ರಿಕೆಯ ಪ್ರಕಟನೆಯು ಥೊರೊಲ್ಲಿ ಎಡ್ವರ್ಟೈಸ್‌ಡ್ (ಚೆನ್ನಾಗಿ ಪ್ರಸಿದ್ಧ) ವಾಗಿದೆಯೆಂದೇ ಹೆಮ್ಮೆ ಪಡುತ್ತೀರಿ.

ಹಾಗೇ ಆಯಿತು ನನಗೂ ಕೂಡ. ಆಫೀಸಿನಲ್ಲಿ ಕೆಲಸವಿಲ್ಲದೆ ನೊಣ ಜಾಡಿಸುತ್ತಾ ಕುಳಿತಾಗ ಬಂತು ಡಾ| ಎಂ. ಎ. ಮೂರ್ತಿ, ಎಂ. ಡಿ., ಬಡಾಕೋಲ್, ಇವರ ಸಂತತಿ ಪ್ರತಿಬಂಧಕ ಚೂರ್ಣದ ಅರ್ಧಪುಟ ಜಾಹೀರಾತು. ಸುಂದರವಾದ ಲೈನ್‌ಬ್ಲಾಕು ಬೇರೆ! ಪತ್ರದಲ್ಲಿ "ನಿಮ್ಮ ಪತ್ರಿಕೆಯಲ್ಲಿ ಸತತವೂ ಜಾಹೀರಾತನ್ನು ಕೊಡಬೇಕೆಂದಿದ್ದೇವೆ. ನಿಮ್ಮ ಕಂಟ್ರಾಕ್ಟು ದರಗಳನ್ನೂ ಕಂಟ್ರಾಕ್ಟ್ ಫಾರ್ಮುಗಳನ್ನೂ ಕಳಿಸಿರಿ. ಪ್ರಥಮ ಸಂಚಿಕೆಯಲ್ಲೇ ತಪ್ಪದೆ ನಮ್ಮ ಜಾಹಿರಾತು ಬರುವಂತೆ ಮಾಡಿರಿ."

ಡಾ| ಮೂರ್ತಿಯವರ ಜಾಹಿರಾತುಗಳು ಆಗ ಪ್ರಾಯಶಃ ಎಲ್ಲ ಪತ್ರಿಕೆಗಳಲ್ಲಿಯೂ ಬರುತ್ತಿದ್ದವು. ಹೀಗಿರುತ್ತಾ ನನ್ನ ಪತ್ರಿಕೆಯ ಜಾಹಿರಾತಿನ ದರಗಳನ್ನು ಅವರಿಗೆ ಕಳಿಸದ ನನ್ನ ಮೂರ್ಖತೆಗೆ ನಾನೇ ಸಖೇದಾಶ್ಚರ್ಯಪಡುತ್ತಾ ಮರು ಟಪ್ಪಾಲಿಗೇ ಅವರಿಗೆ ಎಲ್ಲ ಕರಪತ್ರಗಳನ್ನೂ ಕಳಿಸಿದೆ. ಅವರ ಜಾಹಿರಾತು ಮೊದಲ ಸಂಚಿಕೆಯಲ್ಲೇ ಬಂತು.

ತಿಂಗಳೊಂದರ ಹತ್ತು ರೂಪಾಯಿಯ ಆದಾಯವಂತೂ ನಿಶ್ಚಿತವಾಯಿತಷ್ಟೇ! ಹೀಗೇ ದೇವರು ನಡೆಸಿಯಾನು!

ಒಂದನೇ ಸಂಚಿಕೆ ಪ್ರಕಟವಾದ ಕೆಲವು ದಿನಗಳಲ್ಲಿಯೇ ಡಾ| ಮೂರ್ತಿಯವರ ಸಹಿ ಹಾಕಿ ಕಂಟ್ರಾಕ್ಟು ಫಾರ್ಮು ಬಂತು. ೧೨೦/= ರೂಪಾಯಿಗೆ ಕಂಟ್ರಾಕ್ಟು ವಹಿಸಿಕೊಂಡಿದ್ದರು.

ಮೂರು ತಿಂಗಳಾದೊಡನೆ ೩೦/= ರೂಪಾಯಿಗೆ ಬಿಲ್ ಮಾಡಿ ಕಳಿಸಿದೆ. ಸದ್ಯದಲ್ಲಿಯೇ ಹಣಕಳಿಹಿಸುವುದಾಗಿ ಉತ್ತರ ಬಂತು.

ಆ ಕೆಲವು ದಿನಗಳು ತಾನಾಗಿ ಬರಲೇ ಇಲ್ಲ. ಎರಡನೆ ತ್ರೈಮಾಸಿಕ ಬಿಲ್ಲನ್ನು ಕಳಿಸುವಾಗ ೧೫ ದಿನಗಳೊಳಗಾಗಿ ಹಣವನ್ನು ಕಳಿಸಲೇಬೇಕೆಂದು ಸ್ವಲ್ಪ ಜೋರಾಗಿ ಬರೆದೆ. ಡಾ| ಸಾಹೇಬರ ಉತ್ತರವೇ ಇಲ್ಲ.

ಮತ್ತೊಂದು ತಿಂಗಳ ಮೇಲೆ ಪುನಃ ಹಣಕ್ಕೆ ಪತ್ರ ಬರೆದು ವೌಚರ್ ಕಾಪಿಯನ್ನು ವಿ. ಪಿ. ಯಿಂದ ಕಳಿಸಿದೆ. ಹಿಂದೆ ಬಂತೆಂದು ಬೇರೆ ಹೇಳಬೇಕಾಗಿಲ್ಲ.

ಸಿಟ್ಟಿನಿಂದ ಪುನಃ ಬರೆದೆ. ಎಂಟು ದಿನಗಳೊಳಗೆ ಹಣ ಕಳಿಸದೇ ಹೋದರೆ ಕೂಡಲೆ ಎಲ್ಲಾ ಪತ್ರಿಕೆಗಳಿಗೂ ಈ ವಿಚಾರ ತಿಳಿಸುವುದಲ್ಲದೆ ನಿಮ್ಮ ಸ್ವರೂಪವನ್ನು ಇಡೀ ಜಗತ್ತಿನಲ್ಲಿ ಪ್ರಸಿದ್ಧ ಮಾಡಿಬಿಡುತ್ತೇನೆಂದು!

ಮರುದಿನ "ವಿಶ್ವರೂಪ"ದಲ್ಲಿ ಸಂಪಾದಕೀಯವಾಗಿ ಡಾ| ಮೂರ್ತಿಯವರು ಮಾಡುವ ವಿಶ್ವಾಸಘಾತವನ್ನು ವಿವರಿಸುವ ಒಂದು ಲೇಖನ ಬಂದಿತ್ತು.

ಹಣದ ಆಸೆ ಬಿಟ್ಟೆ! ಆದರೆ ನನ್ನ ಹಾಗೆಯೇ ಅನೇಕರು ಮೋಸ ಹೋಗಿದ್ದಾರೆಂಬುದೊಂದು ತೃಪ್ತಿ.

* * *

ಇನ್ನೊಂದು ಸಂದರ್ಭದಲ್ಲಿ ಹೀಗೆ ನಡೆಯಿತು.

ಕಾಶಿಯಲ್ಲಿ ನಮ್ಮತ್ತ ಕಡೆಯ ಪ್ರಸಿದ್ಧ ವ್ಯಾಪಾರಿಗಳಾದ ಸೂರ್ಯ ನಾರಾಯಣ ಭಟ್ಟರ ಹೆಸರನ್ನು ನೀವು

ಕೇಳಿಲ್ಲವೇ? ಅವರ ಪ್ರಸಿದ್ಧಿಯನ್ನು ಕೇಳಿ ನಾನು ನನ್ನ ಪತ್ರಿಕೆಯಲ್ಲಿ ಜಾಹಿರಾತಿಗಾಗಿ ಅವರನ್ನು ಪ್ರಾರ್ಥಿಸಿದೆ. ಅದು ಅವರಿಗೆ ಮುಟ್ಟಿದ ಮರುಟಪ್ಪಾಲಿಗೇ ಅವರು ಕಂಟ್ರಾಕ್ಟ್ ಫಾರ್ಮಿಗೆ ದಸ್ಕತು ಹಾಕಿ ಕಳಿಸಿದರು. ಅವರು ಒಂದು ಇಡೀ ಪುಟ ಜಾಹಿರಾತನ್ನು (೨೮೦ ರೂಪಾಯಿ ಒಂದು ವರ್ಷಕ್ಕೆ) ಮುಚ್ಚಳದ ಒಳಬದಿಯಲ್ಲಿ ಕೊಡಲೊಪ್ಪಿಕೊಂಡರು. ನನಗೆ ಸಂತೋಷದಿಂದ ಕಣ್ಣೇ ಕಾಣಲಿಲ್ಲ.

ಆರು ತಿಂಗಳಿಗೊಮ್ಮೆ ಬಿಲ್ ಕಳಿಸಬೇಕೆಂದು ಕಂಟ್ರಾಕ್ಟು. ಆರು ತಿಂಗಳಾದೊಡನೆ ಬಿಲ್ ಕಳಿಸಿದೆ.

ಒಂದು ತಿಂಗಳ ಮೇಲೆ ನನಗೆ ಒಂದು ಪಾರ್ಸೆಲ್ ಬಂತು. ಸಂಗಡಲೇ ಒಂದು ಪತ್ರವೂ ಬಂತು.

ಪತ್ರದೊಡನೆ ಚೆಕ್ ಇರಬಹುದೆಂಬ ಆಸೆಯಿಂದ ತೆರೆದೆ. ಆದರೆ ಒಳಗಿಂದ ಕಂಡುದು ಒಂದು ಬಿಲ್, ಒಂದು ರಶೀದಿ ಮತ್ತು ಒಂದು ಪತ್ರ!

ಪತ್ರವನ್ನೋದಿದೆ "ನಿಮ್ಮ ಬಿಲ್ ತಲಪಿತು. ಕುಂಭಮೇಳದ ವ್ಯಾಪಾರದ ಗಡಿಬಿಡಿಯಲ್ಲಿದ್ದದ್ದರಿಂದ ನಾವು ಕೂಡಲೇ ನಿಮ್ಮ ಪತ್ರಕ್ಕೆ ಉತ್ತರ ಬರೆಯಲಿಲ್ಲ. ಈ ಪತ್ರದೊಡನೆಯೇ ನಿಮಗೆ ೧ ಪಾರ್ಸೆಲ್ ಮೂಲಕ ಒಂದು ಉತ್ತಮ ಶಾಲನ್ನು ಕಳಿಸಿದ್ದೇವೆ. ಬಿಲ್ ಇದರ ಜತೆಗಿದೆ. ನಿಮ್ಮ ಬಿಲ್ಲಿನ ಮಟ್ಟಿಗೆ ಅದರಲ್ಲಿ ಕಡಿತಮಾಡಿ ಕಳುಹಿಸಿದ್ದೇವೆ. ಬಾಕಿ ರೂ 13-14-6 ನ್ನು ದಯವಿಟ್ಟು ಕಳಿಸಿರಿ"—

ಅರ್ಥವಾಗಲಿಲ್ಲ— ಬಿಲ್ ನೋಡಿದೆ!

45×2½ ಶುದ್ಧ ರೇಶ್ಮೆ ಶಾಲು ರೂ 153-0-0
ಪೇಕಿಂಗ್ ಮತ್ತು ಪೋಸ್ಟೇಜ್ 0—14—6 ವಜಾ
ನಿಮ್ಮ ಬಿಲ್ (ರಶೀದಿ ಇಟ್ಟಿದೆ.) ರೂ 140-0-0. ಬಾಕಿ ರೂ 13-14-6. ದಯವಿಟ್ಟು ಹಣವನ್ನೂ 140-0-0ಕ್ಕೆ ನಿಮ್ಮ ರಶೀದಿಯನ್ನೂ ಕಳಿಸಿರಿ.

ಪಾರ್ಸೆಲ್ ಒಡೆದು ನೋಡಿದೆ. 3—4—0 ಬೆಲೆ ಬಾಳುವ ಸಿಲ್ಕು ಶಾಲು. ಅದಕ್ಕೆ ರೂ 153-14-6 ಬಿಲ್! ತಲೆಗೆ ಕೈಯಿಟ್ಟು ಕುಳಿತುಕೊಂಡೆ.

ಈ ವಿಚಾರ ತಿಳಿದ ನಮ್ಮ ಪ್ರೆಸ್ ಮೆನೇಜರರು ಹೇಳಿದರು.—ಅವರು ಹಿಂದೆ ವಿಶ್ವರೂಪ ಪತ್ರಿಕೆಯ ಸಂಪಾದಕರ 60 —0—0 ಬಿಲ್ಲಿಗೆ ಬದಲಾಗಿ ಒಂದು ಕುಡುತೆ ಗಂಗಾ ಜಲವನ್ನೂ ಒಂದು ತುಳಸೀ ದಳವನ್ನೂ ಕಳಿಸಿದ್ದರಂತೆ!

ಮತ್ತೊಂದು ಸಲ ನಡೆದ ಸಂಗತಿ ಹೇಳುತ್ತೇನೆ.

ನೀವು ಶೋಧನ ಔಷಧಾಲಯದ ಹೆಸರು ಕೇಳಿದ್ದೀರಾ? ಇದು ಡಾಕ್ಕಾದಲ್ಲಿದೆ. ದೊಡ್ಡ ದೊಡ್ಡ ಇಂಗ್ಲಿಷ್ ಪತ್ರಿಕೆಗಳಲ್ಲಿ ಅವರ ಜಾಹಿರಾತು ಬರುವುದು ನೋಡಿ ಅವರಿಗೆ ಕಾಗದ ಬರೆದೆ.

ಮರುಟಪ್ಪಾಲಿಗೇ ಉತ್ತರ ಬಂತು. ನಮ್ಮ ದರಗಳು ಬಹಳ ಹೆಚ್ಚೆಂದೂ, ನಮ್ಮ ಪತ್ರಿಕೆಯ ಪ್ರಚಾರ ಸಂಖ್ಯೆಯೆಷ್ಟೆಂದೂ ಅದರಲ್ಲಿ ಕೇಳಿದ್ದರು. ಬೇರೆ ಜನರ ಹಾಗೆ ಅಪ್ರಾರ್ಥಿತವಾಗಿ ಇವರ ಜಾಹೀರಾತು ಬರಲಿಲ್ಲವಾದ್ದರಿಂದ ಇವರ ಮೇಲೆ ಸ್ವಲ್ಪ ಆಶೆತೊಟ್ಟೆ. ನಾನು ೫೦೦ ಪ್ರತಿಗಳನ್ನೇ ಮುದ್ರಿಸುತ್ತಿದ್ದರೂ ೧೦,೦೦೦ ಪ್ರತಿಗಳನ್ನು ಮುದ್ರಿಸಲಾಗುತ್ತದೆಂದೂ ಜಾಹಿರಾತಿನ ದರದಲ್ಲಿ ಅವರಿಗಾಗಿ ಸೇಕಡಾ ೨೫ರಂತೆ ಕಡಿತ ಮಾಡಬಹುದೆಂದೂ ಬರೆದೆ. ಹೀಗೇ ಪತ್ರವ್ಯವಹಾರವಾಗಿ ಕೊನೆಗೆ ಸೇಕಡಾ ೫೦ರಷ್ಟು ಕಡಿತಮಾಡಿ ೧ ಪುಟ ಜಾಹಿರಾತು ದೊರೆಯಿತು. ಈ ಮಧ್ಯದಲ್ಲಿ ಎರಡು ಮೂರು ತಿಂಗಳು ಅವರ ಬ್ಲಾಕ್ ಸಮೇತ ಜಾಹಿರಾತನ್ನು ಹಾಕುತ್ತಾ ಬಂದಿದ್ದೆ. ಎಷ್ಟಾದರೂ ದೊಡ್ಡ ಮನುಷ್ಯರಲ್ಲವೇ?

ಕೊನೆಗೆ ಕಂಟ್ರಾಕ್ಟ ಫಾರ್ಮಿಗೆ ದಸ್ಕತಾಗಿ ಬಂತು. ಸಹಿಯ ಮುಂದೆ ಅವರ ಉಪಾಧಿಗಳನ್ನು ನೋಡಿ ತಲೆ ತಿರುಗಿತು!

'ಶ್ರೀ|| ಬೋಕೇಸ್ ಚಂದ್ರ ಬೋಸ್ ಆಯುರ್ವೇದ ಶಾಸ್ತ್ರಿ, M. A. F. C. S (London) M. C. S. (America) ಭೂತ ಪೂರ್ವಪ್ರೊಫೆಸ್ಸರ್: ಬೋಲಪುರ್ ಕಾಲೇಜ್!' ಓಹ್! ಎಷ್ಟು ದೊಡ್ಡ ಮನುಷ್ಯ!

ಬಿಲ್ ಹೋಯಿತು, ಸಂಗಡಲೇ ವೌಚರ್ ಕಾಪಿ ಕಳಿಸಿದ್ದೆ. ಉತ್ತರವಿಲ್ಲ, ನೆನಪಿನ ಓಲೆ ಕಳಿಸಿದೆ, ಪತ್ರಿಕೆಯ ವೌಚರ್ ಕಾಪಿ ತಲಪಿಲ್ಲವೆಂದಾಯಿತು. ಪುನಃ ಒಂದು ಪ್ರತಿ ಕಳಿಸಿದೆ; ಆ ಮೇಲೆ ಇಂದಿಗೂ ಉತ್ತರವಿಲ್ಲ. ಎಲ್ಲ ಗೌಡಬಂಗಾಳಿ ಎನಿಸಿತು!

ನಮ್ಮ ಪ್ರೆಸ್ ಮೆನೇಜರರಿಗೆ ಒಂದು ಅಂಗಡಿಯೂ ಇತ್ತು. ಅಲ್ಲಿ ಅವರು ಕೆಲವು ಔಷಧಗಳನ್ನು ಮಾರುತ್ತಿದ್ದರು. ಇದರ ವಾಸನೆ ಹತ್ತಿ ಬೋಕೇಸ್ ಬೋಸರು ಅವರಿಗೆ ತಮ್ಮ ಕ್ಯಾಟಲಾಗನ್ನು ಒಂದು ಪ್ರೆಸ್ಸಿನ ಹೆಸರಲ್ಲಿ, ಒಂದು ಅಂಗಡಿಯ ಹೆಸರಲ್ಲಿ, ಹೀಗೆ ಎರಡು ಬಿಸಿನೆಸ್ ರಿಪ್ಲೈ ಕಾರ್ಡನ್ನೂ (ಇದಕ್ಕೆ ಚೀಟಿನ ಖರ್ಚು

ಅವರೇ ಕೊಡುತ್ತಾರೆ; ನಾವು ಚೀಟು ಹಚ್ಚಬೇಕಾಗಿಲ್ಲ) ಕಳಿಸಿದರು. ನಾನು ಅದನ್ನು ನೋಡಿ ಅವರಿಂದ ಆ ಕಾರ್ಡುಗಳನ್ನು ಪಡೆದು ಕೊಂಡೆ. ಬೋಕೇಸ್ ಬೋಸರಿಗೆ ಬುದ್ಧಿ ಕಲಿಸಬೇಕೆಂದು ತೋರಿತು.

'ಬೋ.........ಮಗನಿಗೆ ಕಲಿಸುತ್ತೇನೆ' ಎನ್ನುತ್ತ ಎರಡು ಕಾರ್ಡುಗಳಲ್ಲಿ 100—100ರೂಪಾಯಿಯ ಆರ್ಡರು ಬರೆದು ನಾನೇ ದಸ್ಕತು ಹಾಕಿ ಕಳಿಸಿದೆ. 12ನೇ ದಿನ ವಿ. ಪಿ. ಮೂಲಕ ಬಂತು- 2ಪಾರ್ಸೆಲ್ ಔಷಧಿಗಳು 100ರೂಪ್ಯಾಗೆ ನಮ್ಮ ಮೆನೇಜರರು ವಿ. ಪಿ. ತಿರಸ್ಕರಿಸಿ ಬಿಟ್ಟರು. ಆದರಿಂದಾಗಿ ಬೋಕೇಸರಿಗೆ 10 ರೂಪಾಯಿ ನಷ್ಟವಾಯಿತು. ನನಗೇನೂ ಲಾಭವಿಲ್ಲ! ಆದರೂ—ಕೇಡು!

* * *

ನಷ್ಟವೆಷ್ಟೇ ಆದರೂ (ಯಾರಿಗೋ ಏನೋ) ಒಂದಿಷ್ಟು ಅನುಭವವಾಯಿತಲ್ಲ. ಅದೇ ಲಾಭ.

---

# ತತ್ವ

ಬರೆದವರು:

**ಡಾ. ಯನ್. ಶ್ರೀಪಾದ ರಾವ್, ಎಲ್. ಎಂ. ಪಿ.**

ಮದ್ರಾಸ್ ಸರಕಾರದ ೧೯೧೦ರ ಸ್ವರ್ಣ ಪದಕದಾರರು.

---

ಸೃಷ್ಟಿ ಅಥವಾ ಹುಟ್ಟು, ಸ್ಥಿತಿ ಅಥವಾ ಬಾಳ್ವಿಕೆ, ಲಯ ಅಥವಾ ನಾಶ, ಇವು ವಿಶ್ವಕರ್ಮವನ್ನನುಸರಿಸಿ ಕರ್ಮಕ್ಕೆ ಸರಿಯಾಗಿ ಫಲವನ್ನು ಕೊಡುತ್ತವೆ. ಬುದ್ಧಿಯಿಂದ ಸೂಚಿಸಿದಂತೆ ಕರ್ಮಗಳನ್ನು ಮಾಡುತ್ತೇವೆ. ಬುದ್ಧಿಯು ಜ್ಞಾನ ಮತ್ತು ಅನುಭವದಿಂದ ಬರುತ್ತದೆ. ಆದ್ದರಿಂದಲೇ "ಬ್ರಹ್ಮಜ್ಞಾನೇತಿ ಬ್ರಾಹ್ಮಣ—ಬ್ರಾಹ್ಮಣ್ಯೋಮಮ ದೇವತಾ" ಎಂಬ ವೇದವಾಕ್ಯವಿರುವುದು. ಬ್ರಹ್ಮಜ್ಞಾನ ಅಂದರೆ ವಿಶ್ವಕ್ರಮದ ಜ್ಞಾನ. (Laws of Nature). ಇದನ್ನು ಪೂರ್ಣ ತಿಳಿದವನೇ ಬ್ರಾಹ್ಮಣ. ಇಂಥವನು ದೇವರಂತೆ ಪೂಜ್ಯನು. ಈ ಬ್ರಹ್ಮಜ್ಞಾನ ಇಲ್ಲದೆ ಸುಮ್ಮನೆ ಬ್ರಾಹ್ಮಣಕುಲ (Class)ದಲ್ಲಿ ಹುಟ್ಟಿದ್ದರೂ, ಏನೂ ತಿಳಿಯದ ಮೂಢನಿಗೆ ಬ್ರಾಹ್ಮಣನೆಂದು ಹೇಳಬಾರದು. ಅದಕ್ಕಾಗಿಯೇ ಬ್ರಾಹ್ಮಣರಲ್ಲಿ ಹುಟ್ಟಿದವರಿಗೆ ಉಪನಯನಕ್ಕೆ ಬ್ರಹ್ಮೋಪದೇಶವೆಂತಲೂ, ಮುಂಜಿಎಂತಲೂ ಹೇಳುತ್ತಾರೆ. ಉಪನಯನ ಅಂದರೆ ಹೊಸ ಕಣ್ಣಲ್ಲ, ಜ್ಞಾನದ ಕಣ್ಣು, ಬುದ್ಧಿಯ ಕಣ್ಣು. ಈ ಕಣ್ಣಿನಿಂದಲೇ ಬ್ರಹ್ಮವಿದ್ಯೆ ಕಲಿಯಬಹುದು. ಈ ವಿದ್ಯೆಯನ್ನು ಕಲಿಯಬೇಕಾದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಶಡ್ ಅಂದರೆ ಆರು ವೈರಿಗಳನ್ನು ಕಟ್ಟಿಹಾಕಬೇಕು. ಹೀಗೆ ಕಟ್ಟಿಹಾಕಿದ್ದೇನೆಯೆಂಬುದಕ್ಕೆ ಮುಂಜಿ ಅಥವಾ ಮುಂಜಧಾರಣಯೆಂತ ಹೇಳುತ್ತಾರೆ. ಇಂಥವನಿಗೆ ಬ್ರಹ್ಮಚಾರಿ ಎನ್ನುತ್ತೇವೆ, ಹೀಗೆ ಬ್ರಹ್ಮಚರ್ಯವನ್ನು ಆಚರಿಸುವ ಬಗ್ಗೆ ಸರ್ವಸಾಧಾರಣವಾಗಿ ಎಲ್ಲರಿಗೂ ಎಲ್ಲಾ ಕಾಲಗಳಲ್ಲಿಯೂ ಬೇಕಾಗುವಂಥವು ಮೂಗಿನಿಂದ ತೆಗೆದುಕೊಳ್ಳುವ ವಾಯು, ಬಾಯಿಯಿಂದ ನುಂಗುವ ಆಹಾರ, ಇವನ್ನು ದೇಹವು ಸ್ವೀಕಾರಮಾಡಿ ತನಗೆ ಬೇಕಾದವುಗಳನ್ನು ಉಪಯೋಗಿಸಿ ಮಿಕ್ಕಿದವುಗಳನ್ನು ಮಲ, ಮೂತ್ರ ಇತ್ಯಾದಿ ಕೊಳಕಾಗಿ ಹೊರಗೆ ಹಾಕುತ್ತದೆ. ಈ ದೇಹದ ಕೆಲಸವು ಸರಿಯಾಗಿ ತಿಳಿಯಬೇಕಾದರೆ ಈ ಯಂತ್ರವು ಯಾವುದು, ಹೇಗೆ, ಯಾತರಿಂದ ಮಾಡಿದೆ (Anatomy) ಹ್ಯಾಗೆ ಕೆಲಸಮಾಡುತ್ತದೆ (Physiology) ಎಂಬುದು ಸ್ವಲ್ಪಮಟ್ಟಿಗೆ ತಿಳಿಯಬೇಕು. ಈ ವಿಷಯ ಸಂಕ್ಷೇಪವಾಗಿ ಬರುವ ಸಂಚಿಕೆಯಲ್ಲಿ ತಿಳಿಸುವೆನು.

---

# • ಮುಸ್ಸೋಲಿನಿಯ •
# ಜೀವರಕ್ಷಣೆಯ ವಿಚಿತ್ರ ವಿಧಾನ

**ಸರ್ವಾಧಿಕಾರಿಯೊಬ್ಬನ ಜೀವನ**

ಬಡವನಿಗೆ ಸಿಕ್ಕಿದ ಕೊಪ್ಪರಿಗೆಯನ್ನು ಇಷ್ಟು ಭದ್ರವಾಗಿರಿಸುವುದಿಲ್ಲ. ಸರಿ ಮನೆಯಲ್ಲಿರುವ ಕಳ್ಳನನ್ನು ಇಷ್ಟು ಜಾಗ್ರತೆಯಿಂದ ನೋಡುವುದಿಲ್ಲ.

ಬೀದಿಗೆ ಬಂದರೆ ವಿಚಿತ್ರ ಸಂಜ್ಞೆಗಳು ಜನರು ತನ್ನಷ್ಟಕ್ಕೇ ಮಾಯವಾಗುತ್ತಾರೆ. ಅವನು ಹೋಗುವಾಗ ಚರಂಡಿಗಳನ್ನು ಹುಡುಕುತ್ತಾರೆ ಮನೆಗಳನ್ನು ಪರಿಶೋಧಿಸುತ್ತಾರೆ.

ಮುಸ್ಸೋಲಿನಿಯಷ್ಟು ಪ್ರಾಮುಖ್ಯತೆಯು ಇಟಲಿಯ ರಾಜನಿಗೆ ಕೊಡಲ್ಪಡುವುದಿಲ್ಲ. ಸಾವಿರಾರು ಜನರು ಕೇವಲ ಈ ಮಹಾಶಯನ ದೇಹರಕ್ಷಣೆಗಾಗಿ ಅಹೋರಾತ್ರಿ ದುಡಿಯುತ್ತಾರೆ. ಮುಸ್ಸೋಲಿನಿಯ ದೇಹವು ಅಷ್ಟು ಬೆಲೆಯುಳ್ಳದೇ?

**?**

**ಒಬ್ಬನನ್ನು ಕಾಯಲು ಸಾವಿರಾರು ಮಂದಿ**

ಇಟಲಿಯ ಸರ್ವಾಧಿಕಾರಿ ಮುಸ್ಸೋಲಿನಿಯ ದೇಹರಕ್ಷಣೆಯ ವ್ಯವಸ್ಥೆಯು ಸ್ವಾರಸ್ಯದ ಸಂಗತಿಗಳಲ್ಲೊಂದಾಗಿದೆ. ಅಲ್ಲಿಯ ರಾಜರಿಗೂ ಮುಸ್ಸೋಲಿನಿಗೂ ಏಕರೀತಿಯ ಮನ್ನಣೆಯು ಕೊಡಲ್ಪಡುತ್ತಿದೆ. ಇವರಿಬ್ಬರ ದೇಹರಕ್ಷಣೆಗಾಗಿ ಸಾದಾ ಉಡುಪು ಧರಿಸುವ ೩೦೦ ಪೋಲೀಸ್ ಜವಾನರು ಸದಾ ದುಡಿಯುತ್ತಿರುತ್ತಾರೆ. ರಾಜರಿಗಿಂತಲೂ ಮುಸ್ಸೋಲಿನಿಗೆ ಅಪಾಯವನ್ನುಂಟುಮಾಡುವುದು ಮಹಾ ಕಷ್ಟದ ಕೆಲಸವೆನ್ನಬೇಕು. ಮಾತ್ರವಲ್ಲ, ಅವನ ರಕ್ಷಣೆಯ ಕಾರ್ಯವೂ ತುಂಬಾ ಕಷ್ಟವಾದುದೆನ್ನುವುದರಲ್ಲಿ ನಿರ್ವಿವಾದ. ಇಟಲಿಯ ರಾಜರು ತನ್ನ ಹೆಚ್ಚಿನ ಸಮಯವನ್ನು ಅರಮನೆಗಳಲ್ಲಿ ಕಳೆಯುವುದರಿಂದ ಅವರ ಜೀವರಕ್ಷಣಾಕಾರ್ಯವು ಕಷ್ಟಸಾಧ್ಯವಾದುದಲ್ಲ. ಆದರೆ ಮುಸ್ಸೋಲಿನಿಯು ರೋಮ್ ನಗರದಲ್ಲಿ ವಾಸಿಸುವುದು ಹೆಚ್ಚು. ರಾಜಕಾರಣದ ಜೀವಜೀವಾಳದಂತಿರುವ ಈ ಮಹಾಶಯನು ಅನೇಕ ಬಾರಿ ಮಿಲಿಯಗಟ್ಟಲೆ ಜನರ ಮಧ್ಯದಲ್ಲಿರಬೇಕಾದ ಸಂಭವಗಳಿರುತ್ತವೆ. ತನ್ನ ಮನೆಯಿಂದ ಆಫೀಸಿಗೆ ಒಂದು ದಿನದಲ್ಲಿ ಹಲವು ಬಾರಿ ಹೋಗಬೇಕಾಗುತ್ತದೆ.

o o o

**ಒಬ್ಬನಿಗೆ ಆಟ, ಸಾವಿರಾರು ಜನರಿಗೆ ಪ್ರಾಣಸಂಕಟ**

ಸೀನರ್ ಮುಸ್ಸೋಲಿನಿಯು ಸಾಮಾನ್ಯವಾಗಿ ಜನಾಭಿಪ್ರಾಯವನ್ನು ಧಿಕ್ಕರಿಸುವ ಸ್ವಭಾವದವನಾದುದರಿಂದ ಕೊಲೆಯ ಕತ್ತಿಯ ತಿವಿತವನ್ನು ಸದಾ ಹಾರೈಸುತ್ತಿರಬೇಕಾಗುತ್ತದೆ. ಈ ಮಹಾನುಭಾವನು ಏಕಾಂಗಿಯಾಗಿ ಜನಸಮುದಾಯದ ಮಧ್ಯದಲ್ಲಿ ಹೋಗುವುದಲ್ಲದೆ ಕೆಲಸಗಾರರೊಡನೆ ಆಗಾಗ ಸಂಭಾಷಣೆಮಾಡುವುದರಿಂದ ಅವನ ದೇಹಸಂರಕ್ಷಕರ ಕೆಲಸವುಮತ್ತಷ್ಟು ಕಠಿನವಾಗಿ ಪರಿಣಮಿಸಿದೆ. ಮುಸ್ಸೋಲಿನಿಯ ಮತ್ತೊಂದು ದುರಭ್ಯಾಸವೆಂದರೆ ಬೇಸಿಗೆ ಕಾಲದಲ್ಲಿ ಮೋಟಾರ್ ಸೈಕಲಿನಲ್ಲಿ ಕುಳಿತುಕೊಂಡು ಪ್ರತಿದಿನ ಭವ್ಯವಾದ ಅರಮನೆಗಳ ಬಳಿಯಲ್ಲಿರುವ ಕೆರೆಗಳಿಗೆ ಸ್ನಾನಕ್ಕಾಗಿ ಹೋಗುವುದು. ಇದರಿಂದಾಗಿ ಗುಪ್ತ ಪೋಲೀಸರ ಕೆಲಸವು ಇನ್ನಷ್ಟು ಕಷ್ಟವಾಗುತ್ತದೆ. ಜನಸಂದಣಿಯಿಂದ ಕಿಕ್ಕಿರಿದಿರುವ ಇಪ್ಪತ್ತು ಮೈಲು ಉದ್ದದ ರಸ್ತೆಯಲ್ಲಿ ಈ ಪೋಲೀಸರು ಅವನ ರಕ್ಷಣೆಯನ್ನು ಮಾಡಲು ಸದಾ ಸಿದ್ಧರಿರಬೇಕು.

o o o

**ಸರ್ವಾಧಿಕಾರಿಗಳ ಬಳಿಸಾರಬೇಡಿ**

ಮುಸ್ಸೋಲಿನಿ ಮತ್ತು ಅವನ ಕುಟುಂಬವು ‘ವಿಲ್ಲಾ ಟೊಟೊರ್ಣಿಯ”ವೆಂಬ ಭವ್ಯವಾದ ಅರಮನೆಯಲ್ಲಿ ವಾಸಿಸುತ್ತದೆ. ಇಲ್ಲಿ ಸೈನಿಕರು ಯಾವಾಗಲೂ ಕಾದುಕೊಂಡಿರುತ್ತಾರೆ. ಅರಮನೆಯ ಸುತ್ತಲಿರುವ ಗೋಡೆಯ ಹೊರಬದಿಯಲ್ಲಿ ಜೊತೆಜೊತೆಯಾಗಿ ಸಂಚರಿಸುತ್ತಿರುವ ನೂರಾರು ಸೈನಿಕರಿದ್ದಾರೆ. ಅಧಿಕಾರವಿಲ್ಲದ ಸಂದರ್ಶಕರು ಅರಮನೆಯೊಳಗೆ ಪ್ರವೇಶಿಸದಂತೆ ಮಾಡುವುದು ಮಹತ್ವದ ಕೆಲಸವಲ್ಲ; ಕಾರಣ, ಅರಮನೆಯು ಜನ

ಸಂದಣಿಯಿಲ್ಲದ ಪ್ರದೇಶದಲ್ಲಿ ಕಟ್ಟಲ್ಪಟ್ಟಿರುವುದರಿಂದ ಕೆಲಸವಿದ್ದವರು ಮಾತ್ರ ಅಲ್ಲಿಗೆ ಹೋಗುತ್ತಾರೆ. ಹೊಸಬರಾರಾದರೂ ಬಂದೊಡನೆ ಅವರನ್ನು ಹಲವಾರು ಮಂದಿ ಪೋಲೀಸರು ನೋಡುತ್ತಾರೆ. ರಾತ್ರಿಹಗಲು ಗಳೆನ್ನದೆ ಸಾದಾ ಪೋಷಾಕಿನಲ್ಲಿರುವ ನೂರಾರು ಮಂದಿ ಅರಮನೆಯ ಬಳಿಯಲ್ಲಿ ಕಾಯುತ್ತಿರುತ್ತಾರೆ.

ೊ ೊ ೊ

**ರಾಜಕಾರಣದ ಕಾರ್ಯಾಲಯದಲ್ಲಿ**

ಮುಸ್ಸೋಲಿನಿಯ ರಾಜಕೀಯ ಕಾರ್ಯಾಲಯದಲ್ಲಿ ಫ್ಯಾಸಿಸ್ಟ್ ಸೈನ್ಯದಿಂದ ಆರಿಸಿ ತೆಗೆಯಲ್ಪಟ್ಟ ಒಂದು ತಂಡವು ಅವನ ಜಾಗ್ರತೆಯನ್ನು ತೆಗೆದುಕೊಳ್ಳುತ್ತಿದೆ.



ಆದರೆ ಅವರು ಹೆಸರಿಗೆ ಮಾತ್ರ ಅಲ್ಲಿರುವುದಲ್ಲದೆ ನಿಜ್ಯವಾದ ರಕ್ಷಣೆ ನೋಡುವುದಕ್ಕಾಗಿ ಮುಸ್ಸೋಲಿನಿಯು ಸಾದಾ ಬಟ್ಟೆಗಳಲ್ಲಿರುವ ೩೦೦ ಮಂದಿಯನ್ನು ನೇಮಿಸಿದ್ದಾನೆ. "ಪೆಲೆಸ್ಸೊ ವೆನೇಝಿಯಾ" ಎಂಬುದು ನಗರದ ಮಧ್ಯದಲ್ಲಿರುವುದರಿಂದ ರಕ್ಷಣಾ ಕೆಲಸವು ಅತ್ಯಂತ ಕಷ್ಟತಮವಾಗಿದೆ. ಈ ಕಟ್ಟಡದ ಸುತ್ತಲೂ ಜನಸಂದಣಿಯಿಂದ ಕಿಕ್ಕಿರಿದ ಬೀದಿಗಳಿವೆ. ಈ ಬೀದಿಗಳಲ್ಲಿ ವಾಹನಗಳು ಅತ್ಯಂತ ಹೆಚ್ಚಾಗಿ ಚಲಿಸುತ್ತಿರುವುದರಿಂದ ರಕ್ಷಣಾ ಸೈನ್ಯದ ಕೆಲಸವು ಇನ್ನಷ್ಟು ಕಷ್ಟವಾಗುತ್ತದೆ.

ೊ ೊ ೊ

**ಹೊಸಬರಿಗೆ ಸೆರೆಮನೆ!**

ಚುರುಕು ಸ್ವಭಾವದ ಪೋಲೀಸ್ ಜವಾನರ ದಳವೊಂದು ಅತ್ಯಂತ ಉತ್ಸಾಹದಿಂದ ತನ್ನ ಕೆಲಸವನ್ನು ಮಾಡುತ್ತಿದೆ. ಯಾರಾದರೂ ರಾಜಕೀಯ ಕಾರ್ಯಾಲಯದ ಬಳಿಯಲ್ಲಿ ಸಂಚರಿಸುವುದನ್ನು ಕಂಡರೆ ನಿಶ್ಶಬ್ದವಾಗಿ ಪೋಲೀಸರು ಅವರನ್ನು ಕೊಂಡೊಯ್ಯುತ್ತಾರೆ. ಸಮೀಪದಲ್ಲಿರುವ ಪೋಲೀಸ್ ಕೋರ್ಟಿನಲ್ಲಿ ಆ ವ್ಯಕ್ತಿಯು ಅಲ್ಲೇಕೆ ಸಂಚರಿಸುತ್ತಿದ್ದನೆಂಬ ಕುರಿತು ವಿಚಾರಣೆಯಾಗುತ್ತದೆ. ಅವನ ಕೂಲಂಕುಷ ಚರಿತ್ರೆಯು ಕೇಳಲ್ಪಡುತ್ತದೆ.

ೊ ೊ ೊ

**ನಿಶ್ಶಬ್ದ ಶಿಕ್ಷೆ!**

ಅವನ ವಿಚಾರಣೆಯು ಸಮಾಧಾನಕರವಾಗಿದ್ದರೆ ಕ್ಷಮಾಯಾಚನೆ ಮಾಡಿಸಿದ ಬಳಿಕ ಅವನನ್ನು ಬಿಟ್ಟು ಮುಂದೆಂದೂ ಆ ಸ್ಥಳದಲ್ಲಿ ಹಾಗೆ ಸಂಚರಿಸಬಾರದೆನ್ನುತ್ತಾರೆ. ವಿವರಣೆಯು ಅಸಮಾಧಾನಕರವಾಗಿದ್ದಲ್ಲಿ ಅವನನ್ನು ಸೆಂಟ್ರಲ್ ಪೋಲೀಸ್ ಸ್ಟೇಶನಿಗೆ ಕೊಂಡೊಯ್ಯುತ್ತಾರೆ. ಮೋಟಾರ ವಾಹನದಲ್ಲಿರುವವರಿಗೂ ಇದೇ ಕ್ರಮವು ಜಾರಿಮಾಡಲ್ಪಡುತ್ತದೆ. ಈ ಕಾರ್ಯವು ಯಾವ ಗಲಭೆಯೂ ಇಲ್ಲದೆ ನಡೆಯುತ್ತದೆ. ರೋಮಿನ ಸಾವಿರಗಟ್ಟಲೆ ಜನರಿಗೆ ಹೀಗಾಗುವುದೆಂಬ ಅರಿವೇ ಇಲ್ಲ. ಪೆಲೇಝೋ ವೆನೇಝಿಯದ ಬಳಿಯಲ್ಲಿ ಸಂಚರಿಸುವವರಿಗೆ ಏನಾಗುತ್ತಿದೆಯೆಂಬುದರ ರಹಸ್ಯವು ಹೆಚ್ಚಿನವರಿಗರಿತಿಲ್ಲ.

ೊ ೊ ೊ

**ಬೀದಿಗಳಲ್ಲಿ ನಿಗೂಢ ಸಂಜ್ಞೆ!**

ಸಾದಾ ಪೋಷಾಕಿನ ಪೋಲೀಸ್ ದಳಕ್ಕೆ ಇನ್ನೊಂದು ಕಾರ್ಯವಿದೆ. ಮುಸ್ಸೋಲಿನಿಯು ಮೋಟಾರ್ ಕಾರಿನಲ್ಲಿ ಸಂಚರಿಸುವ ಬೀದಿಗಳ ಇತ್ತಂಡಗಳಲ್ಲಿಯೂ ಅವರು ಕಾಯುತ್ತಿರಬೇಕು. ಅವನ ಕಾರು ಎಲ್ಲಾ ದಿನಗಳಲ್ಲಿ ಒಂದೇ ಬೀದಿಯಲ್ಲಿ ಹೋಗುವಂತಿಲ್ಲ. ಯಾರಿಗೂ ಅವನ ಸುಳಿವಿನ ಅರಿವಿರಬಾರದೆಂದು ಒಂದೊಂದು ದಿನ ಒಂದೊಂದು ರಸ್ತೆಯಲ್ಲಿ ಕಾರನ್ನು ಕೊಂಡೊಯ್ಯಲಾಗು

ತ್ತದೆ. ಜನಸಂದಣಿಯ ಮಧ್ಯದಲ್ಲಿ ನೂರಾರು ಗುಪ್ತ ಪೋಲೀಸರು ತಿರುಗುತ್ತಿರುತ್ತಾರೆ. ಸಂಶಯವುಂಟು ಮಾಡುವ ವ್ಯಕ್ತಿಗಳನ್ನು ರಹಸ್ಯವಾಗಿ ಕರೆದುಕೊಂಡು ಹೋಗಿ ಪೋಲೀಸರ ಕೈಗೊಪ್ಪಿಸುತ್ತಾರೆ. ಸೂಕ್ಷ್ಮವಾಗಿ ನೋಡುವ ವ್ಯಕ್ತಿಯು ಮುಸ್ಸೋಲಿನಿಯ ಕಾರು ಬರುವ ಮೊದಲು ಬೀದಿಗಳ ಇತ್ತಂಡಗಳಲ್ಲಿಯೂ ಒಂದು ಅಪೂರ್ವ ಸಂಜ್ಞೆಯನ್ನು ಕಾಣಬಹುದು. ಸ್ವಲ್ಪ ಸಮಯದೊಳಗೆಯೇ ಮುಸ್ಸೋಲಿನಿಯ ಮೋಟಾರು ಕಾರನ್ನು ಅವನು ನೋಡಬಹುದು. ಮೋಟಾರು ಬರುವಾಗ ರಸ್ತೆಯಲ್ಲಾರೂ ಸಂಚರಿಸಬಾರದು. ವಾಯುವೇಗದಲ್ಲಿ ಅವನ ಮೋಟಾರು ನಡೆಯುವುದು! ಮೋಟಾರ್ ಸಾಗಿದೊಡನೆಯೇ ಎಂದಿನಂತೆಯೇ ಜನಸಂದಣಿಯು ತಿರುಗಲಾರಂಭಿಸುವುದು.

o o o

**ಚರಂಡಿಗಳಲ್ಲಿ ಬಾಂಬುಗಳು!**

ಸಂಶಯಾತ್ಮಕ ವ್ಯಕ್ತಿಗಳು ಮುಸ್ಸೋಲಿನಿಯ ಕೊಲೆ ಮಾಡಬಹುದೆಂದು ಪೋಲೀಸಿನವರು ಅಸಾಧ್ಯ ಕೆಲಸಗಳನ್ನು ಮಾಡುವ ಸಂದರ್ಭಗಳುಂಟಾಗಿವೆ. ನಗರದ ಚರಂಡಿಗಳಲ್ಲಿ ಬಾಂಬುಗಳಿರಬಹುದೆಂಬ ಭಯದಿಂದ ಅವುಗಳು ಪ್ರತಿದಿನ ಪರೀಕ್ಷಿಸಲ್ಪಡುತ್ತವೆ. ರಸ್ತೆಗಳಲ್ಲಿ ಮಳೆನೀರು ಹರಿಯುವರೆ ಮಾಡಿದ ತೂತುಗಳು ಕೂಡಾ ಬಾಂಬುಗಳನ್ನು ಒಳಗಿಡಬಹುದೆಂಬ ಭಯದಿಂದ ಮುಚ್ಚಲ್ಪಟ್ಟಿವೆ. ಹತ್ತು ವರುಷಗಳ ಹಿಂದೆ ಒಬ್ಬನು ಮುಸ್ಸೋಲಿನಿಯನ್ನು ಕೊಲ್ಲಲು ವಿದ್ಯುಚ್ಛಕ್ತಿಯ ಕಂಬಗಳಲ್ಲಿ ಬಾಂಬನ್ನಿಟ್ಟದ್ದುದರಿಂದ ಅವುಗಳು ಕೂಡಾ ಪ್ರತಿದಿನ ಪರೀಕ್ಷಿಸಲ್ಪಡುತ್ತಿವೆ. ಇದೇ ರೀತಿಯಲ್ಲಿ ಮಿಲಾನಿನಲ್ಲಿ ರಾಜನ ಮೇಲೆ ಕೂಡಾ ಒನ್ಮೆ ಬಾಂಬು ಹಾಕಲ್ಪಟ್ಟಿದೆ. ಮುಸ್ಸೋಲಿನಿಯು ನಡೆಯುವ ರಸ್ತೆಯ ಇಬ್ಬದಿಗಳಲ್ಲಿರುವ ಮನೆಯವರು ಪ್ರತಿದಿನ ಜಡ್ತಿಮಾಡಲ್ಪಡುತ್ತಿದ್ದಾರೆ. ಅವರ ಮನೆಯ ಕಿಟಕಿಗಳಲ್ಲಿ ಹೊಸಬರಾರಾದರೂ ಅನ್ಯಾಯ ಮಾಡಿದರೆ ಅದಕ್ಕೆ ಮನೆಯವರೇ ಹೊಣೆಗಾರರೆಂಬ ಎಚ್ಚರ ಕೊಡಲಾಗಿದೆ.

o o o

**ಒ. ವಿ. ಆರ್. ಎ!**

ಒ. ವಿ. ಆರ್. ಎ. ಎಂಬ ರಾಜಕೀಯ ಪೋಲೀಸರು ಕೂಡಾ ಮುಸ್ಸೋಲಿನಿಗೆ ವಿರೋಧವಾಗಿ ಮಾಡಲ್ಪಡುವ ಚಟುವಟಿಕೆಗಳನ್ನು ಬಹಳ ಚತುರತೆಯಿಂದ ಕಂಡುಹಿಡಿಯುತ್ತಾರೆ. ಪ್ರಯಾಣಿಕರು ಗಡಿಗಳಲ್ಲಿ ಪರಿಪೂರ್ಣ ಜಡ್ತಿಗೊಳಗಾಗುತ್ತಾರೆ. ಸಂಶಯ ಹುಟ್ಟಿದರೆ ಕೂಡಲೆ ಅಂಥವರನ್ನು ಕೈದುಮಾಡುತ್ತಾರೆ. ಹೊಸಬರು ೨೪ ತಾಸುಗಳಿಗೊಮ್ಮೆ ಪೋಲೀಸ್ ಸ್ಟೇಶನಿನಲ್ಲಿ ಹಾಜರಾಗಬೇಕಾದುದರಿಂದ ಅವರು ಎತ್ತ ಹೋಗುತ್ತಿರುವರೆಂಬುದನ್ನು ಪೋಲೀಸರು ಸುಲಭವಾಗಿ ತಿಳಿಯುತ್ತಾರೆ. ಮೋಟಾರ್ ಸಂಚಾರಿಗಳಿಗೆ ಪೋಲೀಸರ ದೃಷ್ಟಿಯಿಂದ ತಪ್ಪಿಸಿಕೊಳ್ಳುವುದು ಬಹ ಕಠಿನ ಕೆಲಸವಾಗಿದೆ.

o o o

**ಹಾಸಿಗೆಯಲ್ಲೂ ಕಾವಲು!**

ಮುಸ್ಸೋಲಿನಿಯು ಯಾವುದಾದರೊಂದು ಸಾರ್ವಜನಿಕ ಸಮಾರಂಭದಲ್ಲಿ ಭಾಗವಹಿಸುವುದಿದ್ದರೆ ಇವೆಲ್ಲಾ ಯತ್ನಗಳು ಭರದಿಂದ ನಡೆಯುತ್ತವೆ. ಅವನು ಹೋಗುವ ಬೀದಿಯ ಅರಿವು ಎಲ್ಲರಿಗೂ ತಿಳಿದಿದ್ದರೆ ಅದರಲ್ಲಿ ಸಾವಿರಗಟ್ಟಲೆ ಗುಪ್ತ ಪೋಲೀಸರು ಅಲ್ಲಲ್ಲಿ ಅಡಗಿಕೊಂಡಿರುತ್ತಾರೆ. ಮುಸ್ಸೋಲಿನಿಯು ಸಂಚರಿಸುತ್ತಿರುವಾಗ ಅವನ ಶಯನಗೃಹದಲ್ಲಿ ಒಬ್ಬ ಪೋಲೀಸ್ ಅಧಿಕಾರಿಯು ಕಾಯುತ್ತಿರಬೇಕು.

o o o

**ಆಶ್ಚರ್ಯ ಸಂಗತಿ!**

ಇದರಲ್ಲಿ ಗಣನೀಯವಾದ ವಿಚಾರವೆಂದರೆ ಇಷ್ಟೆಲ್ಲಾ ವ್ಯವಸ್ಥೆಯಿದ್ದರೂ ಯಾರಿಗೂ ಇದರ ಅರಿವಿಲ್ಲದಿರುವುದು. ಇತರ ಸರ್ವಾಧಿಕಾರಿಗಳು ಸಾರ್ವಜನಿಕ ರಂಗಕ್ಕೆ ಬರುವುದಿದ್ದರೆ ಪೋಷಾಕು ಹಾಕಿದ ಸೈನಿಕರು, ಪೋಲೀಸರು ಅವರ ಬಳಿಯಲ್ಲಿ ಕಾಣುತ್ತಾರೆ. ಆದರೆ ಮುಸ್ಸೋಲಿನಿಯು ಹಾಗಲ್ಲ. ಅವನನ್ನು ಹೊರಗಿನವರು ನೋಡುವಾಗ ನಿರ್ಭೀತವಾಗಿ ಸಂಚರಿಸುತ್ತಿದ್ದಾನೆಂದು ಭಾವಿಸಬೇಕು. ರಕ್ಷಣೆಯಿಲ್ಲವೆಂಬ ಜನಾಭಿಪ್ರಾಯವು ಕೇವಲ ಅರಿವಿಲ್ಲದ ಮಾತು. ಕಳೆದ ನವಂಬರ ೧೯೨೬ರಿಂದ ಅವನ ಕೊಲೆಯ ಯಾವ ಯತ್ನಗಳೂ ನಡೆಯಲಿಲ್ಲ. ಆ ಮೊದಲು ಮಾಡಲ್ಪಟ್ಟ ನಾಲ್ಕು ಯತ್ನಗಳಲ್ಲಿ ಅವನಿಗೆ ಚಿಕ್ಕದೊಂದು ಗುಂಡಿನೇಟು ಮಾತ್ರ ತಾಗಿದೆ.

# 'ಉಪನಯನ'

## ಅಥವಾ

# 'ಓಂ ಬೋರಿಬಸ್ವಗೆ ಮೂರು ಸಾವಿರ!'

(ಏಕಾಂಕ ನಾಟಕ)

ನಾಟಕಕಾರರು: **ಶ್ರೀ. ಕೊರಡ್ಕಲ್ ಶ್ರೀನಿವಾಸರಾಯರು, ಉಡುಪಿ.**

————○○○○○————

## ದೃಶ್ಯ ೧

[ಚಂದ್ರಪುರದ ಸಮೀಪ ಕಡೆಹಳ್ಳಿಯಲ್ಲಿ ಮೈಸೂರಿನ 'ಮನಮೋಹನ' ಕಾಫೀ ಕ್ಲಬ್ಬಿನ ಒಡೆಯರಾದ ದಾಮೋದರಯ್ಯ ನವರು ಇತ್ತೀಚೆಗೆ ಕಟ್ಟಿಸಿದ ದೊಡ್ಡ ಚಂದದ ಮನೆ. ಅವರೂ ಅವರ ಹೆಂಡತಿ ಸೀತಮ್ಮನೂ ತಮಗಿರುವುದು ಒಂದೇ ಒಂದು ಗಂಡೆಂದು ಹದಮೀರಿದ ಮುದ್ದಿಂದ ಬೆಳೆಯಿಸಿದ ಕೇಶವನಿಗೆ ಉಪನಯನ ಮಾಡಲೋಸುಗ ಮೈಸೂರಿಂದ ತಮ್ಮ ಹುಟ್ಟೂರಾದ ಚಂದ್ರಪುರಿಗೆ ಬಂದಿದ್ದಾರೆ. ದೊಡ್ಡಮನೆಯಲ್ಲಿ ಉಪಯನದ ಸನ್ನಾಹಗಳು ನಡೆಯುತ್ತಿವೆ. ವಿಶಾಲವಾದ ಉಪ್ಪರಿಗೆಯ ಹೋಲಿನಲ್ಲಿ ನೆರೆಹೊರೆಯ ಹೆಂಗುಸರು ಸಂಜೆಯ ಹೊತ್ತು ಕೂಟ ಕೂಡಿ ಉಪನಯನಕ್ಕೆ ಹಪ್ಪಳ ಮಾಡುತ್ತಿದ್ದಾರೆ. ಭಾಗೀರ್ತಮ್ಮ ಹಳೆಯಕಾಲದವಳು; ಚಂದ್ರಮ್ಮ, ಅನ್ನಪೂರ್ಣಮ್ಮ, ಅಮ್ಮಣ್ಣಿಯಮ್ಮ ಮಧ್ಯಕಾಲದವರು; ರಾಧೂ, ಸರೋಜಾ ಇಂದಿನ ಗಾಳಿ ತುಸು ತಾಗಿದವರು. ಇವರ ಕೈಗಳಲ್ಲಿ ಲಟ್ಟಣಿಗೆ ಉರುಳುತ್ತಿದೆ; ಬಾಯಿಗಳಲ್ಲಿ ಮಾತು ಹೊರಳುತ್ತಿದೆ. ಆ ಹರಟೆಯಲ್ಲಿ ಯಾರದಾದರೂ ಮಾತು ಬರುವುದೇತಡ, ಅವರ ಜಾತಕವೆಲ್ಲ ಜೋಯಿಸರಿಲ್ಲದೇ ಸ್ಫುಟವಾಗಿಬಿಡುತ್ತೆ]

**ಚಂದ್ರಮ್ಮ**— ಆ ಕೆರೆಕಟ್ಟೆ ಅನುಸೂಯಮ್ಮನ ಮಗಳಿಗೆ ಇನ್ನೂ ಮದುವೆಯಾಗಿಲ್ಲವಲ್ಲ! ಹುಡುಗಿ ದಿಂಡೆ ಹೆಂಗ್ಸಿನ ಹಾಗೆ ಬೆಳೆದು ಬಿಟ್ಟದೆ! ಮೂರು ವರ್ಷವಾದರೂ ಆಗಿರಬೇಕು ಮೈನೆರೆದು!

**ಅನ್ನಪೂರ್ಣ**— ಆ ಪ್ರಾಯದಲ್ಲಿ ನಾನು ಎರಡು ಮಕ್ಕಳ ತಾಯಿ ಆಗಿದ್ದೆ!

**ರಾಧೂ**— ಈಗ ಹುಡುಗೀರಿಗೆ ಬೇಗ ಮದುವೆ ಮಾಡ್ಲೇ ಕೂಡ್ದಂತಲ್ಲ? ಶಾರದಾ ಕಾನೂನು!

**ಸರೋಜಾ**— ಹ್ಞೂಂ! ೧೪ ವರ್ಷ ಪೂರಾ ದಾಟಬೇಕಂತೆ! ಅಂದರೆ ಮೈನೆರೆಯದೆ ಮದುವೆ ಆಗೋದಿಲ್ಲಾಂತ ಆದ ಹಾಗಾಯಿತು! ಅಷ್ಟಾದಮೇಲೆ ಜೀವಾ ಬಿಟ್ಕೊಂಡು ಯಾಕೆ ಅವಸರ ಮಾಡೋದು? ಹದಿನಾರಾದರೇನು? ಇಪ್ಪತ್ತೈದಾದರೇನು? ಎಲ್ಲಾ ಒಂದೇ. ಎಂದಾದರೊಂದು ದಿನ ಆಗುತ್ತೆ.

**ಭಾಗೀರ್ತಮ್ಮ**— ಎಂದಾವರೊಂದು ದಿನ ಆಗುವುದು ಮತ್ತೊಂದು! ನೀವೂ ಹೆಮ್ಮಕ್ಕಳು ಆ ಸಾಲಿಗೆ ಸೇರಿದ್ರಾ? ಹೋಯ್ತು, ಎಲ್ಲ ಹೋಯ್ತು! ಇನ್ನು ಬ್ರಾಹ್ಮಣ ಶೂದ್ರ, ಮಡಿಮೈಲಿಗೆ, ಜಾತಿನೀತಿ, ಮೇಲು ಕೀಳು, ಎಲ್ಲಿ ಉಳೀತು? ಕಲಿಕಾಲ ಮಿತಿಮೀರಿ ಹೋಯ್ತೂಂತ ಮೊನ್ನೆ ವೆಂಕಟೇಶಭಟ್ರು ಹರಿಕತೇಲಿ ಹೇಳಿ ಹೇಳಿ ತಲೆ ಬಡ್ಕೊಂಡದ್ದು ಸುಳ್ಳೂಂತೀರಾ?

**ರಾಧೂ**— ಹರಿಕತೇಲಿ ಹಾಗೆ ಹೇಳುತ್ತಾರೆ. ತಮ್ಮ ಮಕ್ಕಳನ್ನ ಮಾತ್ರ ಇಂಗ್ಲಿಷ್ ಶಾಲೆಗೆ ಕಳ್ಸಾತ್ರೆ! ಹೊಲೆಯರೊಟ್ಟಿಗೇ ಕೂತುಕೊಳ್ತಾವಂತೆ ಆ ಮಕ್ಕಳು!

**ಭಾಗೀರ್ತಮ್ಮ**— ರಾಮ ರಾಮಾ! ಹೇಳೋದು ಶಾಸ್ತ್ರ ಇಕ್ಕೋದು ಗಾಳಾಂತಾಯ್ತೂ ಅವರ ಪಾಡೂ!

**ಸರೋಜಾ**— ಅವರೇನು ಮಹಾ? ತಿಪ್ಪಾಚಾರ್ರಿಂದ್ಲೂ ಮೇಲಾ ಅವರು ನೇಮನಿಷ್ಠೇಲಿ? ಆ ಆಚಾರ್ರ ಮಗಳು - ಆ ಬಾಲವಿಧವೆ-ಬೆಂಗಳೂರಲ್ಲಿ ಅಣ್ಣನ ಮನೇಲಿದ್ದು ಕಾಲೇಜಿಗೆ ಹೋಗ್ತಾಳಲ್ಲ? ಅವಳಿಗೆ ಮದುವೆ ಆಗ್ತೇಂತ ಸುದ್ದಿ ಬಿದ್ದದೆ!

**ಭಾಗೀರ್ತಮ್ಮ**— ಓ ದೇವ್ರೇ! ನಾ ನ್ಯಾಕೆ ಸಾಯ್ಲಿಲ್ಲಪ್ಪಾ! ಇನ್ನೇನೆಲ್ಲಾ ನೋಡೋಕೆ ಕೇಳೋಕೆ ಉಂಟೋ!

**ಸರೋಜ**— ಬಾಗಜ್ಜಿ ಕಿವಿಗೆ ಮುಳ್ಳು ಚುಚ್ಚಿದಂತಾಗುತ್ತಾ ಈ ಸುದ್ದಿ? ಆದರೆ ಲೀಲು ಕೆರೆಗೆ ಹಾರಿ ಜೀವಾ ಕಳ್ಕೊಂಡದ್ದು, ಪೆಂಕಮ್ಮ ಘಂಡರಾಪುರ ಯಾತ್ರೆಮಾಡಿ ಬಂದದ್ದು, ಶಾಂಭವಿ ಅನುಸೂಯಾಮ್ಮನ ಗುಟ್ಟಿನ ಕಷಾಯ ಕುಡ್ಕೊಂಡು ಆರುತಿಂಗಳಿಗೊಮ್ಮೆ ಕತ್ತಲ್ಕೋಣೆಯೊಳಗೇ ಬಿದ್ದಿರೋದು, ಹಾಳು ಬಾವಿಯೊಳಗೆ ಹಸಿಹಸಿ ಹೊಕ್ಕಳ ಮಕ್ಕಳು ಬಿದ್ದಿರೋದು, ಇವೆಲ್ಲಾ ಸುದ್ದಿಗಿಂತ ವಿಧವೆಯ ಮದುವೆ ಸುದ್ದಿ ಅಸಹ್ಯ ಆಗ್ತಾ ಅಜ್ಜೀ?

**ಭಾಗೀರ್ತಮ್ಮ**— ಆದ್ರೆ ಆಚಾರ ಎಂಬೋದೊಂದುಂಟಲ್ಲ ಸರೋಜಾ!

**ರಾಧೂ** - ಆಚಾರದ ಮರೆಯಲ್ಲಿದ್ದು ಅನಾಚಾರ ಮಾಡೋರಿಗಿಂತ ಆಚಾರದ ಮೂಗು ಮುರ್‍ದು ಸದಾಚಾರದಲ್ಲಿರೋರೇ ಮೇಲು. ಆಚಾರದವರ ಹಾರಾಟ ಎಷ್ಟೆಂಬೋದು ಸರಕಾರದವರಿಗೆ ಗೊತ್ತು. ಇನ್ನೊಂದು ಕಾನೂನು ತರ್ತಾರೆ ನೋಡಿ! ಏನು ಗೊತ್ತೇ? ಹೆಂಡ್ತಿ ಇದ್ದ ಹಾಗೆ ಮತ್ತೊಂದು ಮದುವೆ ಮಾಡ್ಕೊಳ್ಳ ಕೂಡ್ದೂಂತ!

**ಭಾಗೀರ್ತಮ್ಮ**— ಹೌದೇನೇ ರಾಧೂ! ಹಾಗಾದ್ರೆ ಕಾಲ ತೀರಾ ಕೆಟ್ಟಿಲ್ಲಾನ್ನು. ಹೆಣ್ಣಿನ ಮೇಲೆ ಹೆಣ್ಣು ಕೊಟ್ಟು ಆಗುವ ಅವಾಂತರ - ನಾನು ಚೆನ್ನಾಗಿ ಅನುಭವಿಸಿದವಳು! ಆ ಮೇಲೆ ಕೊನೆಗೆ ಈ ವೈಧವ್ಯ! ಅಯ್ಯೋ ದೇವ್ರೇ! ಬೇಡ, ಜಲ್ಮ ಜಲ್ಮಾಂತರಕ್ಕೂ ಬೇಡ, ನನ್ನ ಕಡುವೈರಿಗಳಿಗೂ ಬರಬಾರ್‍ದು! ನಮ್ಮ ಸಂಕಷ್ಟ ಎಲ್ಲಾ ಯೋಚಿಸಿದ್ರೆ ಇಂದಿನ ಹೆಮ್ಮಕ್ಕಳೇ ಪುಣ್ಯಾತ್ಮರೂಂತ ತೋರುತ್ತೆ! ನಮ್ಮ ಕಾಲದ ಹೆಣ್ಣಿನ ಬಾಳೂಂದ್ರೆ ಕತ್ತೆ ಬಾಳು!

**ಸರೋಜ**— ಹಾಗ್ಬನ್ನಿ ಅಜ್ಜೀ!

(ಸೀತಮ್ಮನ ಪ್ರವೇಶ: ಕೂತುತಿಂದು ತೋರಬಳೆದ ೩೫ ವರುಷದ ಚಂದದ ಹೆಂಗಸು. ಕಿವಿಗಳಲ್ಲಿ ವಜ್ರದ ಕಮಲು. ಮೂಗಿನಲ್ಲಿ ಮಿರುಗುವ ಬೊಟ್ಟು. ಕುತ್ತಿಗೆ ಕೈಗಳನ್ನು ಕಂಡರೆ ಚಿನ್ನಾಭರಣಪ್ರಿಯ ಸ್ತ್ರೀಯೆಂದು ತೋರುವಷ್ಟು ಅಲಂಕಾರ. ಎಲ್ಲರಿಂದಲೂ ಒಳ್ಳೆಯವಳೆಂದು ಹೊಗಳಿಸಿಕೊಳ್ಳಬೇಕೆಂದು ಆತುರದ ವಿನಯ.)

**ಸೀತಮ್ಮ**— ಅಯ್ಯೋ, ನಿಮಗೆಲ್ಲಾ ಎಷ್ಟು ತ್ರಾಸ ಕೊಡಬೇಕಾಗಿ ಬಂತೂಂದ್ರೆ! ಆದ್ರೆ ಏನು ಮಾಡ್ಲೀ? ಉಪ್ನಯಕ್ಕೆ ಮಾರಾಟದ ಹಪ್ಪಳ ತಕೊಂಡರೆ ಊರೂರೇ ನಕ್ಕಾರಲ್ಲಾ! ನಿಮಗೆಲ್ಲ ಎಷ್ಟು ಬಾಯಾರಿದೆಯೊ! ಈಗ ಬರುತ್ತೆ ಕಾಫಿ. ಗೌರಮ್ಮ ಕೆಳಗೆ ತಣಿಸುತ್ತಿದ್ದಾಳೆ.

**ಭಾಗೀರ್ತಮ್ಮ**— ಅಯ್ಯೋ ಸೀತೂ! ನಿನ್ನ ಕಾಫಿಗೀಪಿ ನನಗೆ ಬೇಡ ಕಾಣೆ! ಸಾಯೋ ಕಾಲಕ್ಕೆ........ಅಂತ ಯಾಕೆ ನನಗೆಲ್ಲಾ ಅದು!

**ಸೀತಮ್ಮ**— ನೀವು ಕುಡಿಯೋಲ್ಲಾಂತ ನನಗೆ ಗೊತ್ತಿಲ್ವಾ ಅಜ್ಜೀ! ನಿಮಗೆ ಪ್ರತ್ಯೇಕ ಮಡೀಲಿಯೇ ಲಿಂಬೆ ಹಣ್ಣು ಹಿಂಡಿ ಅಮೃತಪಾನಕ ಮಾಡಿ ತರೋಕೆ ಹೇಳ್ಯೇನೆ!

**ಭಾಗೀರ್ತಮ್ಮ**— ಏನು ಪುಣ್ಯಾಮಾಡಿ ಹುಟ್ಟಿದ್ದಿಯೋ ನೀನು ಹೀಗೆಲ್ಲಾ ಧರ್ಮಾ ಮಾಡೋಕೆ! ನಿನ್ನಂಥವ್ರ ಮಗನ ಉಪ್ನಯಾಂದ್ರೆ ಹೀಗಿಲ್ಲಾಂತ ಆಗಿಬಿಡ್ಬೇಕು ಬಲ್ಲಿಯಾ?

**ಚಂದ್ರಮ್ಮ**— ಹಾಗೇ ಆಗಿಬಿಡ್ತದೆ! ಆ ಸುಬ್ಬಣ್ಣ ಸಾಲಮಾಡಿ ತನ್ನ ಮಗನ ಉಪ್ನಯ ಅಷ್ಟು ಡೌಲು ಮಾಡಿರುವಾಗ ಇಲ್ಲಿದ್ದೆಂತೂ ನೂರುಪಾಲು ಮೇಲ್ಕೈ ಆಗಲೇಬೇಕು. ಸೀತಕ್ಕನಿಗೆ ಕಸಿವಿಸಿ ಕನಸಿನಲ್ಲೂ ಬರೋದಿಲ್ಲ!

**ಅನ್ನಪೂರ್ಣ**— ನಮ್ಮ ಸೀತೂಂದ್ರೆ ಭಾಗ್ಯಲಕ್ಷ್ಮಿ! ಅವಳ ಕೈ ಹಿಡ್ದೇಗೊತ್ತು ದಾಮೂಗೆ ದುಡ್ಡಿನ ಬರತ ಉಕ್ಕಿಉಕ್ಕಿ ಬಂತಲ್ಲ!

**ಭಾಗೀರ್ತಮ್ಮ**— ಅದೇ ನಾನು ಹೇಳಿದ್ದು. ದಾಮು ಈಗೇನಾದ್ರೂ ಕೈಯ್ಯೂರಿ ಏಳ್ಬೇಕಾಗಿಲ್ಲ! ಆದ್ರೂ ಗಂಡಸರು ಕಸಿವಿಸಿಯವರು. ಇದ್ರಲ್ಲೆಲ್ಲ ಓಜ ಮಾನ್ತಿ ಮೈಹಾಕದೆ ಸುಮ್ಮಗಿದ್ದು ಬಿಟ್ಟರೆ ಬಂಡೋಕೆಲ್ಲ ಸೈಸೈ ಎಂಬಹಾಗೆ ಆಗೋದೇ ಇಲ್ಲ ಅದೂ ಒಂದೇ ಒಂದು ಮುದ್ದಿನ ಉಪ್ನಾಯ! ಎಂದ ಮೇಲೆ........

**ಸೀತಮ್ಮ**— ಅಲ್ಲ ಮತ್ತೆ! ಹಿಂದಿಲ್ಲ ಮುಂದಿಲ್ಲ! ನಾನೊಂದು ಗಂಡಿನ ಮುಖ ನೋಡ್ಬೇಕೂಂತ ಯಾವ ಯಾವ ದೇವರ ಕೈಕಾಲುಕಟ್ಟಿಕೊಂಡಿದ್ದೆ! ಏನೇನೆಲ್ಲಾ ಮಾಡಿದ್ದೆ! ಆ ದೇವ್ರಿಗೇ ಗೊತ್ತು!

**ಭಾಗೀರ್ತಮ್ಮ**— ಅದೆಲ್ಲಾ ನಮಗೆ ಹೇಳ್ಬೇಕೇ ಸೀತೂ! ಆದ್ರಿಂದ್ಲೇ ಹೇಳಿದೆ ಕೈಬೀಸಿ ಮಾಡಿಸಿಬಿಡು ಉಪ್ನಯಾನ್ನ!

**ಚಂದ್ರಮ್ಮ**— ಅದೇನು ಸೀತಕ್ಕಾ 'ಮುಂದಿಲ್ಲಾ'ಂದ್ರಿಯಲ್ಲ? ನೀವೇನು ಅರುವತ್ತು ವರುಷದ ಮುದುಕಿಯಾಗಿ ಬಿಟ್ರಾ? ಒಂದೇ ಹೆಣ್ಣಿದ್ದವರು ಅದನ್ನು ಧಾರೆಯೆರೆದು ಕೊಡೋದೇ ತಡ, ಗಂಡು ಹುಟ್ಟಿಯೇ ಬಿಡುತ್ತೆ! ಒಂದೇ ಗಂಡಿದ್ದವರು ಅದರ ಕುತ್ತಿಗೆಗೆ ನೂಲು ಹಾಕೋದೇ ತಡ, ಹೆಣ್ಣು ಬೆನ್ನಹಿಂದೇ ಬಂದುಬಿಡ್ತೇ! ನೋಡಿ ಬೇಕಾದ್ರೆ, ಬರುವ ವರ್ಷ ಇಷ್ಟೊತ್ತಿಗೆ ನಮ್ಮ ಸೀತಕ್ಕನ ಕೈಯಲ್ಲಿ ಹೆಣ್ಣುಮಗು!

**ಭಾಗೀರ್ತಮ್ಮ**— ಆಗಲಪ್ಪಾ ಆಗಲಿ! ನಮ್ಮ ಸೀತೂಗೊಂದು ಪುಥ್ಥೀಗೊಂಬೆ ಹಾಗಿನ ಹೆಣ್ಣುಮಗು ಹುಟ್ಲೀ! ಅಲ್ಲಾ, ಆ ದೇವ್ರು ಯಾಕೆ ಹೀಗೆ ಮಾಡ್ತಾನೊ! ಬೇಕುಬೇಕೆಂಬೋಟರಿಗೆ ಮಕ್ಕಳನ್ನ ಕೊಡೋದಿಲ್ಲ

ದಮ್ಮಯ್ಯಾ ಬ್ಯಾಡಾ ಬ್ಯಾಡಾ ಅನ್ನೋರಿಗೆ, ತಗೊಳ್ಳಿ, ಮ್ಯಾಲಿಂದ ಮ್ಯಾಲೆ!

**ಸೀತಮ್ಮ**— ನಾನೂ ನಿಮ್ಮೊಟ್ಟಿಗೆ ಸೇರಲಾ ಹಪ್ಪಳ ಮಾಡೋಕೆ?

**ಅನ್ನಪೂರ್ಣಮ್ಮ**— ಬೇಡಕ್ಕಾ, ನಿನ್ನ ಕೈಗೆ ಬೊಕ್ಕೆಬಂದೀತು!

**ಚಂದ್ರಮ್ಮ**— ಯಾಕೆ ಬೇಡ? ತನ್ನ ಮಗನ ಉಪ್ನಯದ ಹಪ್ಪಳ ಮಾಡೋದೆಂದ್ರೆ ಅದೂ ಒಂದು ಭಾಗ್ಯ! ಅದ್ರಲ್ಲೂ ಒಂದು ಸುಖ ಉಂಟು! ಸೀತಕ್ಕಾ ಬನ್ನಿ, ಇಲ್ಲಿದೆ ಮಣೆ ಲಟ್ಟಣಿಗೆ. ಒಂದೆರಡು ಲಟ್ಟಿಸಿ ಹಾಕಿ! ನಿಮ್ಮ ಚಿನ್ನದ ಕೈ ಹೆಂದೋ ಚಂದಾ ನೋಡ್ತೇವೆಂದ್ರೆ! (ಸೀತಮ್ಮನು ಚಂದ್ರಮ್ಮನ ಬಳಿಯಲ್ಲಿ ಹೋಗಿ ಕುಳಿತು ಹಪ್ಪಳಮಾಡಲು ತೊಡಗುವಳು.)

**ಸೀತಮ್ಮ**—ನೀವೆಲ್ಲಾ ನಗೋಕೆ ಇದು! ಹಾಗ್ಮಾಡಿಯಾದ್ರೂ ನಿಮ್ಮ ತ್ರಾಸಾ ಒಂದಿಷ್ಟು ಕಡಿಮೆಯಾಗ್ಲಿ

**ಅಮ್ಮಣಿಯಮ್ಮ**—ತ್ರಾಸಾ ಹೋಗೋಕೆ ಬರ್ತಲ್ಲ ಕಾಫಿ ಚರಿಗೆ! ಹೀಗೆ ಎರಡಾಯ್ತು! ಎರಡಾದ್ದು ಮೂರಾಗೋದು ಹೇಗೆ?

**ಅನ್ನಪೂರ್ಣ**—ಮೂರಾಗೋದು ಹ್ಯಾಗೆನ್ನಲಾ? ಶುಭಕೆಲ್ಸಕ್ಕೆ ಹಪ್ಪಳ ಮಾಡ್ತಿದ್ದೇವೆ ನಾವು! ಒಂದು ಶೋಭಾನೆ ಹಾಡೋದು ಬೇಡ್ವೇ? ಸರೋಜಾ, ಹೇಳೇ ಒಂದು! ಕೈ ಬೇಗಸಾಗುತ್ತೆ.

**ಸೀತಮ್ಮ**—ಹ್ಞೂಂ. ಅದು ಮುಗಿಯೋಷ್ಟರಲ್ಲಿ ಕಾಫಿ ಬರುತ್ತೆ. ಸರೋಜಾ ಹಾಡಿನ ಮಲ್ಲೀಂತ ಹೇಳೋದು ಕೇಳಿದ್ದೆ. ಉಪ್ನಯಕ್ಕೆ ಮರುದಿಬ್ಬಣದ ಕಡೆಯಿಂದ ಹಾಡುಗಾರ್ತಿ ಅಕ್ಷತೆ ಅವಳಿಗೆ ಕೊಡೋದೂಂತ ಮಾಡಿದ್ದೆ!

**ಭಾಗೀರ್ತಮ್ಮ** ಭಾಳಾ ಚೆನ್ನಾಯ್ತು! ರಾಧೂ ಅವಳೊಟ್ಟಿಗೆ ಕೂಡಿಬಿಟ್ಟರೆ ದಿಬ್ಬಣದಕಡೆಯೋರು ಸೋತು ಮೂರುದಿನ! ಹ್ಞೂಂ, ಸರೋಜಾ, ಎತ್ತೇ ಶೊಭಾನೇನ್ನ.

(ಸರೋಜಳು ಹಾಡತೊಡಗುವಳು ಹಾಡು ಮುಗಿಯುತ್ತಾ ಬರುವಾಗ ಗೌರಮ್ಮ ಕಾಫಿಚೆಂಗಿ ಎತ್ತಿಕೊಂಡು ಬರುವಳು. ದೃಶ್ಯಾಂತ್ಯ.)

## ದೃಶ್ಯ ೨.

[ ಪುರೋಹಿತ ತ್ರಿವಿಕ್ರಮ ಭಟ್ಟರ ಮನೆ. ಅವರೆಲ್ಲೋ ಹೊಟ್ಟೆ ಹಿಡಿಯಲಾರದಷ್ಟು ಉಂಡು ಬಂದು ಚಾವಡಿಯಲ್ಲಿ ಹೊರಳುತ್ತಿದ್ದಾರೆ. ಅವರ ಹೆಂಡತಿ ಲಕ್ಷ್ಮಮ್ಮ ಒಳಗೆ ಇದ್ದಾಳೆ. ಮಗ ವಾಮನನು ಸತ್ಯನಾರಾಯಣ ಮಾಡಿಸುವ ಮಂತ್ರ ಕಂಠಪಾಟ ಮಾಡುತ್ತಿದ್ದಾನೆ. ದಾಮೋದರಯ್ಯನವರ ಪ್ರವೇಶ. ಜರಿಯಂಚಿನ ದೋತ್ರ ಉಟ್ಟು ಸಿಲ್ಕಿನ ಶರ್ಟು ತೊಟ್ಟು ಕುತ್ತಿಗೆಗೆ ಕನ್ನಡಿ ಹಾವು ಸುತ್ತಿ ಜೋಲಾಡುವಂತೆ ಮಿಂಚುವ ಅಂಚು ಮಾತ್ರ ತೋರುವ ಶಾಲು ಹಾಕಿಕೊಂಡಿದ್ದಾರೆ. ಎಂಟು ಬೆರಳುಗಳಲ್ಲಿ ಹನ್ನೆರಡು ಉಂಗುರಗಳು. ಎಡ ಮುಂಗೈಯಲ್ಲಿ ಚಿನ್ನದ ಚೈನಿನಿಂದ ಬಿಗಿದ ರಿಷ್ಟುವಾಚು. ಬಲ ಮುಂಗೈಯಲ್ಲಿ ಹರಳಿನ ಕಮಲ ಕುಳ್ಳಿರಿಸಿರುವ ಚಿನ್ನದ ಚೈನು. ಕಿವಿಗಳಲ್ಲಿ ವಜ್ರದ ಒಂಟಿ. ಕಾಲಲ್ಲಿ ಹಾಫ್ ಶೂ. ವೇಷ ಭೂಷಣಗಳು ಕೂಗಿ ಹೇಳುತ್ತವೆ ಹೋಟೆಲವಾಲಾ ಎಂದು. ದಾಮೋದರಯ್ಯನವರು ಮೆಟ್ಟಲಿನ ಬಳಿ ಶೂ ಕಳಚಿಟ್ಟು ಮೇಲೆ ಬಂದು ತ್ರಿವಿಕ್ರಮ ಭಟ್ಟರಿಗೆ ಉದ್ದಂಡ ನಮಸ್ಕಾರ ಮಾಡುವಷ್ಟರಲ್ಲಿ ಭಟ್ಟರು ಎದ್ದು ಕೂತು]

**ತ್ರಿವಿಕ್ರಮ ಭಟ್ಟರು**—ಓಹೋಹೋ! ರಾಯ್ರು! ದಯಮಾಡ್ಸಿ! ಶ ತ ಮಾ ನಂ ಭ ವ ತು. . . . . ಆಯುರಾರೋಗ್ಯ ಐಶ್ವರ್ಯಾದಿ ವೃದ್ಧಿರಸ್ತು! ಆಹಾ! ಚಿನ್ನದಂಥಾ ಗುಣ ರಾಯರದ್ದು! ಪುರೋಹಿತರಿಗೆ ದಂಡವತ್ಪ್ರಣಾಮ ಮಾಡ್ಬೇಕೆಂಬ ಬುದ್ಧಿಯಿದ್ದವರು ಯಾರಿದ್ದಾರೆ ಈಗ! ಸುಮ್ಮಗೆ ದುಡ್ಡು ಸಂಪಾದನೆ ಮಾಡಿದರಾಯಿತೆ? ಸೂಳೆ ಸಂಪಾದನೆ ಮಾಡೋದಿಲ್ಲವೆ? ಗುಣ ಬೇಕು, ಗುಣ! ಮುಖ್ಯ. ತಮ್ಮ ಹಾಗೆ ದಾನ ಧರ್ಮ ಗುರು-ಹಿರಿಯರು ದೈವ ದೇವರು ಎಂಬ ಶ್ರದ್ಧೆಯಿಟ್ಟುಕೊಂಡು ಇರುವವರೂ ಇನ್ನೂ ಕೆಲವರಾದ್ರೂ ಇದ್ದಾರೆ. ಅದ್ರಿಂದಲೇ ಧರ್ಮ ಉಳಿದಿದೆ! ಲೋಕಾ ನಡೆಯುತ್ತೆ! (ಹೆಂಡತಿಯನ್ನುದ್ದೇಶಿಸಿ) ಏ. . .ಏ. . .ಏ. . . ಏನು ಮಾಡ್ತೀಯೇ ಒಳಗೆ? ಮನೆಗೆ ಯಾರು ಬಂದಿದ್ದಾರೆ, ಏನು ಕತೆ, ಏನು ಉಪಚಾರ, ಅಂತ ವಿಚಾರ್ಸಿಕೊಳ್ಳೋದು ಬೇಡ್ವೇ? ಕೈಕಾಲು ತೊಳೆಯೋಕೆ ನೀರು, ಆ ಬಣ್ಣದ ಚಾಪೆ, ಗಂಗಾಮೃತದ ವಿಲೆವಾರಿ, ಎಲೆ ಹರಿವಾಣ. . .ಏ. . .ಏ. . .ಏನು ಮಾಡ್ತೀಯೆ ಒಳ್ಗೇ?

**ಲಕ್ಷ್ಮಮ್ಮ**—ಯಾರು ಬಂದ್ರೂಂತೇನೆ! (ಎನ್ನುತ್ತ ಹೊರಗೆ ಬಂದು ನೋಡಿ) ಓಹೋ! ರಾಯರಾ? ನಾನು ಮತ್ತ್ಯಾರು ಬಂದು ಬಿಟ್ರೋಂತ ಕಕ್ಕಾಬಿಕ್ಕಿ ಇವರ ಕೂಗಿಂದ! ರಾಯ್ರು ಬಂದ್ರೂಂದ್ರೆ ನನಗೆ ತಿಳಿಯೋದಿಲ್ವೇ ಏನು ಮಾಡ್ಬೇಕೂಂತ? ಹೋಮದ ಸಾಹಿತ್ಯ ಪಟ್ಟಿ ಹೇಳೋ ಹಾಗೆ ಯಾಕೆಲ್ಲ ವಿವರ? ಅದೂ ಬಂದಿರೋದು ನಮ್ಮ ರಾಯರಲ್ವಾ? ಅವರೂಂದ್ರೆ ನಮ್ಮ ಮನೆಯವರ ಹಾಗೇ (ಎನ್ನುತ್ತ ವೈಯಾರದಿಂದ ಒಳಗೆ ಹೋಗಿ ಒಂದು ತಂಬಿಗೆ ನೀರು ತಂದಿಡುವಳು)

**ತ್ರಿವಿಕ್ರಮ**—ರಾಯರೇ, ತಮ್ಮ ಕಾಲಿಗೇನೂ ದೂಳು ತಾಗೋ ಹಾಗಿಲ್ಲ. ಆದರೆ ಬಿಸಿಲಿಂದ ಮುಖ ಬಾಡಿದೆ.

ಸ್ವಲ್ಪ ಮುಖದ ಮೇಲೆ ಹಾಕಿಕೊಳ್ಳೋಣಾಗಲಿ ನೀರು, (ರಾಯರು ಅಂಗಳದ ತುದಿಗೆ ಮುಖ ತೊಳೆಯುರಿಕ್ಕೆ ಹೋಗುವರು. ಭಟ್ಟರು ಹೆಂಡತಿಯೊಡನೆ ಮೆಲ್ಲ ಮೆಲ್ಲನೆ) ಏ. . . ಏ. . . ಏನುಂಟೆ ಒಳಗೆ? ಕಾಫಿ ಶಾಸ್ತ್ರ ಆಗ್ಬೇಕಲ್ಲ? ಏನೂ ಇಲ್ಲವಾ? (ಮಗನನ್ನು ಉದ್ದೇಶಿಸಿ) ಮಾಣಿ, ಕಿಟ್ಟನ ಅಂಗಡಿಯಿಂದ ಒಂದರ್ಧಾಣೆ ಕಾಫಿ ಹುಡಿ, ಒಂದು ಪಾವು ಸಕ್ಕರೆ, ನಾಲ್ಕು ಬಾಳೆ ಹಣ್ಣು. . . . .

**ಲಕ್ಷ್ಮಮ್ಮ**— (ಸಿಡುಕಿಂದ ಆದರೂ ಮೆಲ್ಲ) ನಿಮ್ಮ ಹೋಮದ ಪಟ್ಟಿ ವಿಲೇವಾರಿ ಬೇಡಾ ನಾನೆಲ್ಲ ತರ್ಸಿ ಕೊಳ್ತೇನೆ. ಮನೆ ಹಿಂದಿನಿಂದ್ಲೇ ಬಂದು ಕಿಟಕಿಯಿಂದ ಒಳಗೆ ಕೊಟ್ಟು ಬಿಡು ವಾಮನ!

**ತ್ರಿವಿಕ್ರಮ**—ಹ್ಞಾಂ ಹಾಗಾದ್ರೆ ಹಾಗೆ! (ರಾಯರು ಮುಖ ತೊಳೆದು ಕೊಂಡು ಬರುವುದನ್ನು ಕಂಡು) ಇಗೊಳ್ಳಿ ರಾಯ್ರೇ ಬೈರಾಸು, ಕೈಕಾಲು ಒರಸಿಕೊಳ್ಳಿ. . . . ಇಲ್ಲಿ, ಇಲ್ಲಿ, ಚಾಪೆ ಮೇಲೆ ದಯಮಾಡ್ಸೋಣಾಗಲಿ! ವಾಮನಾ, ಆ ಲೋಡು ತಂದಿಡೊ! ಕಲ್ಗೊಂಬೆಯ ಹಾಗೆ ನಿಂತು ಬಿಟ್ಟಿದ್ದಿಯಲ್ಲ! ಎಲ್ಲಿ ಆ ಬಣ್ಣದ ಕೈ ಬೀಸಣಿಗೆ? ಮನೆಗೆ ದೊಡ್ಡವರು ಬಂದ್ರೆ ಹ್ಯಾಗೆ ಉಪಚಾರ ಮಾಡ್ಬೇಕೂಂತ ಗೊತ್ತಿಲ್ಲ? ಅವರ ಮನೆಗೆ ಹೋಗಿ ಹೊಟ್ಟೆ ಬಡಿಯೋತನಕ ತಿಂದು ಮುಷ್ಟಿ ಮುಷ್ಟಿ ದಕ್ಷಿಣೆ ತರಲಿಕ್ಕೆ ಮಾತ್ರ ಗೊತ್ತೇ! ಹ್ಞಾಂ, ಹಾಗೆ! ಏ. . .ಏ. . .ಅವಸರವಸರ ಮಾಡಿ ಎಲ್ಲ ಹಾಳಾಡ ಬೇಡಾಂದೆ! ವಾಮನಾ, ಒಳಗೆ ಹೋಗಿ ಹೇಳು ಅವಳಿಗೆ ಅವಸರ ಬೇಡಾಂತ! . . . . . . . . (ವಾಮನ ಒಳಗೆ ಹೋಗುವನು)

**ದಾಮೋದರ**—ನಾನು ಬಂದೇಂತ ಏನೋ ಎಲ್ಲ ಗಡಿಬಿಡಿ ಮಾಡಿ ಕೊಳ್ಳುವಂತಿದೆಯಲ್ಲ? ನನಗೆ ಬೇಕಾದ್ದು ತಮ್ಮ ಬೇಟಿ. ಅದು ದೊರಕಿತು. ಅದೇ ಮಹಾ ಸಂತೋಷ.

**ತ್ರಿವಿಕ್ರಮ**—ಸರಿಯೇ. ಆದರೂ ನಮ್ಮ ಧರ್ಮಾಂತ ಉಂಟಲ್ಲ? ಅಲ್ಲದೆ ತುಸು ಬಿಸಿಲಲ್ಲಿ ನಡೆದು ಆಯಾಸ ವಾಗಿರಬಹುದು. ಒಂದಿಷ್ಟು ಕಾಫಿ, ಅಷ್ಟೆ!

**ದಾಮೋದರ**— ಯಾಕೆಲ್ಲ ತ್ರಾಸ? ಏನೂ ಬೇಕಾಗಿಲ್ಲ.

**ತ್ರಿವಿಕ್ರಮ**—ತ್ರಾಸವೇನೂ ಇಲ್ಲ. ತಮ್ಮ ದಯದಿಂದ ಎಲ್ಲ ಸಿದ್ಧವಿದೆ. ಒಂದು ಕ್ಷಣದೊಳಗೆ ಆಗಿ ಬಿಡುತ್ತೆ. ಇರಲಿ, ರಾಯರ ಸವಾರಿ ಸದ್ಯ ಊರಿಗೆ ಬರುತ್ತೆಂತ ಸೀತಕ್ಕ ಹೇಳಿದ್ದು, ನಿನ್ನೆ ಬಂತೆಂತ್ಲೂ ಸುದ್ದಿ ಬಂದಿತ್ತು. ನಾನೇ ಸಂಜೆಗೆ ಅತ್ತಕಡೆ ಬರ್ಬೇಕೂಂತಿದ್ದೆ. ರಾಯರ ಸವಾರಿಯೇ ಬಂತಲ್ಲ? ಬಡವರ ಮನೆ ಬಾಗಿಲಿಗೆ ಭಾಗೀರಥಿ ಬಂದ ಹಾಗೆ ಬಹಳ ಸಂತೋಷ! ಎಲ್ಲಾ ಕ್ಷೇಮ ತಾನೆ? ಹ್ಯಾಗೆ ನಡೀತದೆ ಮೈಸೂರಲ್ಲಿ ತಮ್ಮ ಹೋಟ್ಲು?

**ದಾಮೋದರ**—ಪರವಾಯಿಲ್ಲ, ತಮ್ಮ ಆಶೀರ್ವಾದದಿಂದ!

**ತ್ರಿವಿಕ್ರಮ**—ಎಲ್ಲ ಆ ವಿಘ್ನೇಶ್ವರನ ಕೃಪಾ ಕಟಾಕ್ಷ! ಚೆನ್ನಾಗಿ ಒಲಿಸಿಕೊಂಡಿದ್ದೀರಿ ಅವನ್ನ! ದಿನಾಲೂ ಹಣ್ಣುಕಾಯಿ ಮೂರು ಸೇರಕ್ಕಿ ಅನ್ನ ನೈವೇದ್ಯ! ತಾವಲ್ಲದೆ ಮತ್ಯಾರು ಕೊಟ್ಟಿದ್ದಾರೆ ಈ ಮೊದಲು ಅವನಿಗೆ? ಈ ಸರ್ತಿ ಬಂದ ಮರ್ಯಾದೆಗೆ ಏನಾದರೂ ಕಿಂಚಿತ್ತು ಸೇವೆ ನಡ್ಸಿ ಬಿಡಿ. ತಮ್ಮ ಬೆನ್ನ ಹಿಂದೇ ಇದ್ದಾನೆ ಅಂವ! ನಾನೆಂತೂ ದಿನಾಲೂ ತಮ್ಮ ಹೆಸರು ಹೇಳಿ ಪುಷ್ಪಾಂಜಲಿ ಸುರಿದು ಅಡ್ಡ ಬೀಳ್ತೇನೆ ತ್ರಿಕಾಲವೂ! ಹೋದಲ್ಲಿ ಬಂದಲ್ಲಿ ರಾಯರ ಬೆಂಬಲ ವಾಗಿದ್ದು ಬಿಡೂಂತ ನನ್ನ ಪ್ರಾರ್ಥನೆ. ಮತ್ತೇನು ವಿಶೇಷ? ಏನು ಸವಾರಿ ಬಂತು?

**ದಾಮೋದರ**—ಮತ್ತೇನಿಲ್ಲ, ನಮ್ಮ ಕೇಶವನಿಗೆ ಕೊರಳಿಗೊಂದು ನೂಲು ಸಿಕ್ಕಿಸಿದರೆ ಆದೀತೂಂತ ಯೋಚನೆ. ಏನು ಗುರು ಬಲ ಉಂಟೋ ಇಲ್ಲವೋ? ನಮ್ಮ ಗ್ರಹಗತಿ ಹ್ಯಾಗೆ? ಎಂಬ ವಿಚಾರ ಎಲ್ಲ ಶೋಧಿಸಿ ಹೇಳಿದರಾದೀತೂಂತ ಬಂದೆ. (ಎಂದು ಕಿಸೆಯಿಂದ ಜಾತಕಗಳನ್ನು ತೆಗೆದು ಅವರ ಮುಂದಿಡುವನು)

**ತ್ರಿವಿಕ್ರಮ**— ಓಹೋ, ಜಾತಕಗಳನ್ನು ತಂದೇ ಬಿಟ್ಟಿದ್ದೀರಿ! ಯಾವ ಯಾವ ಕೆಲಸಕ್ಕೆ ಹೊರಡುವಾಗ ಏನೇನು ಹಿಡ್ಕೋ ಬೇಕೆಂಬೋದು ರಾಯರಿಗೆಲ್ಲಾ ಗೊತ್ತು! ಎಂಥಾ ಸೂಕ್ಷ್ಮ ಬುದ್ಧಿ ರಾಯರದು! ಮೈಸೂರಲ್ಲಿ ಯಾರ ಹತ್ರಾದರೂ ತೋರಿಸಿದ್ದೀರಾ ಇವನ್ನು?

**ದಾಮೋದರ**— ಆ ಕಟ್ಲೇನೇ ಇಟ್ಟುಕೊಂಡಿಲ್ಲ. ತಾವು ನಮ್ಮ ಕುಲ ಪುರೋಹಿತರು; ನಮ್ಮ ಕುಲದೇವತೆ ಆ ವಿಘ್ನೇಶ್ವರ. ಅವನ ತಲೆಗೆ ಒಂದು ಚೊಂಬು ನೀರು ಹಾಕೊವ್ರು. ಅಂವನೇ ತಮ್ಮ ಬಾಯಿಂದ ಹೇಳಿಸ ಬೇಕು. ಅದಕ್ಕೆ ಮತ್ತೆ ಅಪ್ಪೀಲೇ ಇಲ್ಲಾ. ಅಲ್ಲದೆ ಸಿಕ್ಕ ಸಿಕ್ಕವರೊಡನೆ ಜಾತಕ ತೋರಿಸಿದ್ರೆ ರೊಕ್ಕಕ್ಕೆ ಕಾರಾ

ಮಾತ್ರ! ಸಸೂತ್ರ ಒಂದೂ ಆಗೋಲ್ಲ. ಎಲ್ಲ ಯದ್ವಾತದ್ವಾ!

**ತ್ರಿವಿಕ್ರಮ**—ಚಿನ್ನದಂಥಾ ಮನುಷ್ಯರ ಬಾಯಿಂದ ಬರುವ ಮುತ್ತಿನಂಥಾ ಮಾತೂಂದ್ರೆ ಹೀಗೇ. ತಮ್ಮ ಧರ್ಮಬುದ್ಧಿ, ವಿವೇಕ- ಮುಖಸ್ತುತೀಂತ ತಿಳಿಯ ಬಾರ್ದು ರಾಯ್ರು, ನನ್ನಿಂದ ಅದೊಂದು ಎಂದಿಗೂ ಅಗೋದಿಲ್ಲ, ಅದೊಂದು ಕಲೀದಿದ್ದದ್ರಿಂದ್ಲೇ ಇದ್ದದ್ದು ಇದ್ದ ಹಾಗೆ ಹೇಳಿ ಬಿಡೋದ್ರಿಂದ್ಲೇ ಹಲವರಿಗೆ ನನ್ನನ್ನ ನೋಡಿದ್ರೆ ಆಗೋದಿಲ್ಲ- ಆ್ಹಂ, ತಮ್ಮ ಧರ್ಮ ಬುದ್ಧಿ, ವಿವೇಕ, ವಿಚಾರ, ಆಚಾರ, ಈ ಊರವರಿಗೆ ಎಲ್ಲಿಂದ ಬಂದೀತು? ಅವರಿಗೆ ಆ ವಿಘ್ನೇಶ್ವರ ಕೈಹಿಡಿಯೋದೂ ಅಷ್ಟರಲ್ಲೇ ಉಂಟೂನ್ನಿ..... (ಮುರುಕು ದೃಷ್ಟಿ ಚಕ್ರ ಮೂಗಿಗೇರಿಸಿ ಕೇಶವನ ಜಾತಕ ನೋಡುತ್ತ) ಓಹೋ, ಮಗೂಗಿನ್ನೂ ಹದಿಮೂರು ವರ್ಷ ಆಗುತ್ತಪ್ಪೆ! ಬ್ರಹ್ಮೋಪದೇಶಕ್ಕೆ ಹೇಳಿದ ಕಾಲ ಇದು! ಆಹಾ! ಗುರುಬಲ ಎಷ್ಟು ಚೆನ್ನಾಗಿದೆ! ಲಗ್ನದಲ್ಲೇ ಗುರು ವಿದ್ದಾನೆ! ಮೊದಲಾಗಿದ್ದರೆ ಇಷ್ಟೇ ಪ್ರಶಸ್ತವಾಗಿ ಗುರುಬಲ ಸಿಕ್ಕುತ್ತಲೇ ಇದ್ದಿಲ್ಲ. ಗುರುಬಲ ಚೆನ್ನಾಗಿ ಸಿಕ್ಕದೆ ಉಪನಯನ ಮಾಡಿದ್ರೆ ಬಸವನ ಕುತ್ತಿಗೆಗೆ ಬಳ್ಳಿ ಹಾಕಿದ ಹಾಗೆ! ಎಲ್ಲ ನಿಷ್ಪ್ರಯೋಜನ! ಊರಲ್ಲೆಲ್ಲ ಮಾಡ್ತಾರಲ್ಲ ಯಾವ ಕರ್ಮಕ್ಕೆ? ಇನ್ನು ತಮ್ಮ ಗ್ರಹಗತಿ ವಿಚಾರ- (ಎಂದು ದಾಮೋದರಯ್ಯರ ಜಾತಕ ತೆಗೆದು)—ಧನಾಧಿಪತಿ?... ಹ್ಹ! ಭಾಗ್ಯ ಸ್ಥಾನದಲ್ಲೇ! ಲಾಭಾಧಿಪತಿ? ಶಹಭಾಸ್! ಲಗ್ನದಲ್ಲೇ! ಸರಿ, ಧನಲಕ್ಷ್ಮಿ ತಮ್ಮಲ್ಲೇ ತಳವೂರಿ ಕೂತ ಹಾಗೇ ಇನ್ನು! ಅನಿಷ್ಟ ಗ್ರಹರೆಲ್ಲಿದ್ದಾರೆ?.... ಕುಜ...ರಾಹೂ...ಕೇತೂ?... ಹ್ಹೂ, ಸ್ವಲ್ಪ ವಕ್ರರಾಗಿದ್ದಾರೆ. ಆದರೆ ಅಬಲ ಕ್ಷೇತ್ರದಲ್ಲಿ! ಅವರಿಂದೇನೂ ಆಗದು! ಆದರೂ ವಿಷ ಪರೀಕ್ಷೆ ಮಾಡೋದ್ಯಾಕೆ? ಅಂತೂ ಈ ಸಂದರ್ಭದಲ್ಲೇ ಹಿಂದು ಮುಂದೆ ಅನುಕೂಲ ದಿನ ನೋಡಿ ನವಗ್ರಹ ಹೋಮ, ಚಂಡಿಕಾ ಶಾಂತಿ, ಮೃತ್ಯುಂಜಯ ಜಪ, ಇಷ್ಟು ನೆರವೇರಿಸಿ ಬಿಡಿ. ಆ ಮೇಲೆ ನೋಡಿ ತಮ್ಮ ದಶಾನಾಥನ ಪ್ರತಾಪ!... ಇನ್ನು ಸೀತಕ್ಕನ ಜಾತಕ(ಎಂದು ಅದನ್ನು ತೆಗೆದು-ನೋಡುತ್ತ) ಹ್ಹೂಂ! ವಹಾರೆವ್ವಾ! ಯೋಗ ಬರ್ತಿದೆ! ಕನ್ಯಾರತ್ನ ಆಗೋದಿದ್ರೆ ಇದೇ ಯೋಗದಲ್ಲೇ! ಇದ್ರಿಗಿದ್ರೆ ಎಂದ್ರೇನು? ಇದ್ದೇ ಇದೆ! ಆದ್ರೆ ಕಿಂಚಿತ್ತು ದೇಹಾರಿಷ್ಟ ದೋಷ ಉಂಟು. ಅದಕ್ಕೆ ಪರಿಹಾರ ವಿಶೇಷವೇನೂ ಮಾಡಬೇಕಿಲ್ಲ. ಅವರ ಹೆಸರಲ್ಲಿ ಒಂದು ವರ್ಷ ದಿನಾಲೂ ಅಶ್ವತ್ಥನಾರಾಯಣ ಸ್ತೋತ್ರ, ನಾಗಪೂಜೆ, ಸೂರ್ಯನಮಸ್ಕಾರ, ಸಹಸ್ರನಾಮ ಪಾರಾಯಣ- ಇಷ್ಟು ಮಾಡಿಸಿ ಬಿಡಿ, ಸಾಕು! (ಬಾಗಿಲ ಕಡೆಗೆ ನೋಡಿ) ಆ್ಹಂ! ಏನೇ ತಯಾರಾಯ್ತಾ? ಇಲ್ಲಿಗೆ ತಂದು ಬಿಡು. (ಲಕ್ಷ್ಮಮ್ಮನು ದಾನಕ್ಕೆ ಬಂದಿದ್ದ ಬೆಳ್ಳಿಯ ಲೋಟಿಗಳೆರಡರಲ್ಲಿ ಕಾಫಿ, ಒಂದು ತಟ್ಟೆಯಲ್ಲಿ ನಾಲ್ಕು ಬಾಳೆಹಣ್ಣು ತರುತ್ತ)

**ಲಕ್ಷ್ಮಮ್ಮ**—ಇದೆಲ್ಲ ರಾಯರು ಸೀತಕ್ಕನ ಮುಂದೆ ಹೇಳಿ ಹೇಳಿ ನಗ್ಲಿಕ್ಕೆ ವ್ಯಾಪಾರ! ಸೀತಕ್ಕನ ಕಾಫಿ ಕೈ ನನಗೆಲ್ಲಿಂದ ಬಂದೀತು! (ಎನ್ನುತ್ತ ಅವರ ಮುಂದೆಇಡುವಳು.)

**ದಾಮೋದರ**—ಓಹೊ! ಎಂಥಾ ಬಾಳೆ ಹಣ್ಣು! ನಮ್ಮ ಮೈಸೂರಲ್ಲಿಯೂ ಸಿಕ್ಕದು!

**ತ್ರಿವಿಕ್ರಮ**—ದಿನಾಲೂ ವಿಘ್ನೇಶ್ವರನಿಗೆ ತಮ್ಮ ಹೆಸರಲ್ಲಿ ತಿನ್ಸೋದು ಇಂಥಾದ್ದನ್ನೇ! ಇಂದೊಂದು ದಿನವಾದ್ರೂ ಅವನ ಪ್ರಸಾದ ರಾಯರ ಬಾಯಿಗೆ ಬೀಳ್ಬೇಕೂಂತ ಅವನೇ ರಾಯರನ್ನ ಇಲ್ಲಿ ತನಕಾ ಬರ್ಸಿದ್ನೋ ಏನೋ! ತಗೊಳ್ಳಿ ರಾಯ್ರೇ, ಅವನಿಗೆ ತೃಪ್ತಿಯಾಗಲೀ! ಮತ್ತಿನ ವಿಚಾರ ಮತ್ತು.

**ದಾಮೋದರ**— ತಾವೂ ಕೈಹಾಕಿ.

**ತ್ರಿವಿಕ್ರಮ**—ನನಗೊಂದಿಷ್ಟು ಕಾಫಿ ಮಾತ್ರ! ಇಂದಿನ ಊಟ ತುಸು ಜಾಸ್ತಿಯಾಗಿ ಬಿಟ್ಟಿದೆ! ಜರೇ ತೃಷೆ, ತೃಷೆ! ತೃಷೆ!

(ದಾಮೋದರಯ್ಯನವರು ಬಾಳೆಯ ಹಣ್ಣು ತಿನ್ನುತ್ತಿರುವರು. ತ್ರಿವಿಕ್ರಮ ಭಟ್ಟರು ಕಾಫಿ ಲೋಟಿಗೆ ಕೈಗೊಡುತ್ತಿರುವರು—ದೃಶ್ಯಾಂತ್ಯ.

(ಮುಂದುವರಿಯುವುದು)

# - ದಕ್ಷಿಣ ಕನ್ನಡದಲ್ಲಿ -

### ಹಣಕ್ಕೆ ಜಯವಾಯಿತೆ?

ಜಿಲ್ಲಾ ಕಾಂಗ್ರೆಸ್ ಕಮಿಟಿಯಲ್ಲಿ ಅವಿಶ್ವಾಸ ಠರಾವು! ಠರಾವುಗಳ ಈ ಕಾಲದಲ್ಲಿ ಇದರಲ್ಲೇನೂ ಆಶ್ಚರ್ಯವಿಲ್ಲ. ಈಗಿನ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರ ಮೇಲೆ ಅವಿಶ್ವಾಸ ಠರಾವು ಕಳೆದವಾರ ಮಂಗಳೂರಲ್ಲಿ ನಡೆದ ಸಭೆಯಲ್ಲಿ ಬಂದರೂ ಸ್ವಾರಸ್ಯದ ವರದಿಗಳು ಮಾತ್ರ ಈಗ ಹೊರಗೆ ಬರುತ್ತಿವೆ.

○ ○ ○

ಜಿಲ್ಲಾ ಕಾಂಗ್ರೆಸ್ ಕಮಿಟಿಯ ಸಭೆಗಳು ಒಂದು ವರುಷದಲ್ಲಿ ನಡೆಯುವುದೇ ನಾಲ್ಕು ಅಥವಾ ಐದು. ಸದಸ್ಯರು ಈಗೀಗ ತಮ್ಮ ಕೈಯಿಂದ ಖರ್ಚು ಮಾಡಿಕೊಂಡು ಬರಬೇಕಾಗಿಲ್ಲವಂತೆ. ಸಂತೋಷದ ಸಂಗತಿ. ಅವರಿಗೆ ತಂತೀ ಮೂಲಕ ಸ್ವಾಗತ; ಮೋಟಾರ್ ಕಾರುಗಳೇ ಮೊದಲಾದ ಸೌಕರ್ಯಗಳು ಕಳೆದ ವಾರ ಒದಗಿಸಲ್ಪಟ್ಟವೆಯೆಂಬ ಅಂತರಂಗದೊಂದು ಸುದ್ದಿಯು ಈಗ ಹೊರ ಬಂದಿದೆ. ಇರಲಿ, ಹಣವು ಚಲಾವಣೆಗಿರುವಂತಹದು. ಹಾಗಿರುವಾಗ ಸಿರಿವಂತರು ಹೀಗೆ ಹಣವ್ಯಯ ಮಾಡುವುದರಲ್ಲಿ ಯಾರಿಗೂ ಬೇಸರವಿಲ್ಲ. ಸಮತಾವಾದಿಗಳನ್ನುವಂತೆ ಧನಿಕರ "ಶೋಷಣೆ"ಯಿದು. ನಮ್ಮ ಜಿಲ್ಲೆಯಲ್ಲಿ ಕೆಲವು ಪ್ರಸಿದ್ಧ ಧನಿಕರ ಶೋಷಣೆಯು ಭರದಿಂದ ನಡೆಯುತ್ತಿದೆಯಂತೆ. ಸಮತಾವಾದಕ್ಕೆ ಜಯವಾಗಲಿ!

○ ○ ○

ಪ್ರತಿಯೊಬ್ಬರಿಗೂ ಒಂದೊಂದು ಅಭಿಪ್ರಾಯಗಳಿವೆಯೆಂದು ನನ್ನ ನಂಬುಗೆ. ಆದರೆ ಈ ನಂಬುಗೆಯಲ್ಲಿ ಕೊಂಚ ವ್ಯತ್ಯಾಸವಾಗಬೇಕಾಗಿದೆ. ಪ್ರಸಿದ್ಧವಾದ ಅವಿಶ್ವಾಸ ಠರಾವಿನ ಸಭೆಯಲ್ಲಿ ಕೆಲವು ಜಿಲ್ಲಾ ಕಮಿಟಿ ಸದಸ್ಯರು "ತಟಸ್ಥ" ಭಾವವನ್ನು ತಾಳಿ ಇತ್ತಂಡದವರಿಗೂ ತಮ್ಮ ಉದಾರತೆಯನ್ನು ತೋರಿಸಿದ್ದಾರಂತೆ. ಪ್ರಾಯಶಃ ಇದಕ್ಕೆ ಇಂಗ್ಲಿಷಿನಲ್ಲಿ "ನ್ಯೂಟ್ರಲ್" ಎಂದೆನ್ನುತ್ತಾರೆಂದು ನನ್ನ ಭಾವನೆ "ನ್ಯೂಟ್ರಲ್" ಅಂದರೆ ಇಂದಿನ ಭಾಷಾಕೋಷದಲ್ಲಿ ಬೇರೆಯೇ ಅರ್ಥವು ಸೂಚಿಸಲ್ಪಟ್ಟಿದೆ. "ಇತ್ತಂಡದವರನ್ನು ಮೆಚ್ಚಿಸುವವರು, ಗಾಳಿ ಬಂದಂತೆ ಕೊಡೆ ಹಿಡಿಯುವವರು, ದಾಕ್ಷಿಣ್ಯದ ದಯಶಾಲಿಗಳು, "ಏನು ಬೇಕಾದರೂ ಮಾಡಿಕೊಳ್ಳಲಿ, ನಮಗೇನು" ಎಂದು ಮೊದಲಾಗಿ ಹೇಳುವವರು, ಇತ್ಯಾದಿ, ಇತ್ಯಾದಿ"

○ ○ ○

ಈ ಮನೋವೃತ್ತಿಯ ಮೂಲವು ಇಂಗ್ಲೆಂಡಿನದು. ತಾಟಸ್ಥ್ಯದ ತವರೂರದು. ಬ್ರಿಟಿಷ್ ಸರಕಾರದ ಪ್ರಜೆಗಳಾಗಿರುವಾಗ, ಕೆಲವರು ತಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನು ಪೂರ್ಣವಾಗಿ ಉಪಯೋಗಿಸಿ, "ಮೌನಂ ಪಂಡಿತ ಲಕ್ಷಣಂ" ಎಂಬ ಜನಪ್ರೀತ ಜಾಣ್ನುಡಿಯನ್ನು ಕಾರ್ಯತಃ ಆಚರಿಸಿ ತೋರಿಸಿದ ಆ ಸನ್ಮಾನ್ಯ ಸದಸ್ಯರು ಜನತೆಯ ಪ್ರಶಂಸೆಗೆ ಪಾತ್ರರಾಗಿದ್ದಾರೆಂದು ಪ್ರತ್ಯೇಕ ಹೇಳಬೇಕೆ?

○ ○ ○

ಇವರು ಸದಸ್ಯರಾದುದೂ ದಾಕ್ಷಿಣ್ಯಕ್ಕಾಗಿ. ಜಿಲ್ಲಾ ಕಾಂಗ್ರೆಸ್ ಕಮಿಟಿಯ ಚುನಾವಣಾ ಸಮಯದಲ್ಲಿ ನಾಮಪತ್ರಗಳು ಸುದರ್ಶನ ಚಕ್ರದಂತೆ ತಿರುಗುತ್ತವೆ.

"ನೀವು ಸದಸ್ಯರಾಗಬೇಕು ಸ್ವಾಮಿ"

"ಬೇಡ- ಅಷ್ಟೆಲ್ಲಾ ನಮಗೇಕೆ"

"ನೀವು ದಸ್ಕತು ಹಾಕದೆ ಉಪಾಯವಿಲ್ಲ"

"ಆಯಿತಪ್ಪ, ನೀವು ಹೇಳುವಾಗ ಮತ್ತೇನು ಮಾಡುವುದು?... ನಮಗೆ ಈ ಮೆಂಬರಿಕೆ ವಿಚಾರ ಹೆಚ್ಚು ಗೊತ್ತಿಲ್ಲ. ನೀವಿರುವಾಗ ನಮಗೆ ತಿಳಿಯಬೇಕೆಂದಿಲ್ಲ"

"ಹೌದು. ಅದೆಲ್ಲಾ ನಾವು ಮಾಡುತ್ತೇವೆ"

ಈ ರೀತಿ ಒತ್ತಾಯದ ಸದಸ್ಯರು, ದಾಕ್ಷಿಣ್ಯದ ಸದಸ್ಯರು, ಮತ್ತು ಹಲವು ವಿಧದ ಸದಸ್ಯರು ಇದ್ದಾರೆನ್ನಿ. ಇದು ಸಾಮಾನ್ಯ ಎಲ್ಲಾ ಸಂಸ್ಥೆಗಳಲ್ಲಿರುವ ಸ್ಥಿತಿ.

○ ○ ○

ಸಭೆಯ ವರದಿಗಳು ಒಂದೊಂದು ಪತ್ರಿಕೆಯಲ್ಲಿ ಒಂದೊಂದು ವಿಧ. ಮದ್ರಾಸಿನ ದಿನ ಪತ್ರಿಕೆಯೊಂದರಲ್ಲಿ ಅನಾಮಧೇಯರೊಬ್ಬರು ಬರೆದ ವರದಿಯಲ್ಲಿ ಅನಾವಶ್ಯಕವಾಗಿ ಅತ್ಯಂತ ಜನಪ್ರೀತ ಅಧ್ಯಕ್ಷರ ಮೇಲೆ ಅಪನಂಬಿಕೆಯ ಠರಾವನ್ನು ತಂದು ಅಕ್ಷಮ್ಯ ಅಪರಾಧ ಮಾಡಿದ್ದಾರೆಂಬಭಿಪ್ರಾಯವು ಹುಟ್ಟುತ್ತದೆ. ಕಲ್ಪನಾ ಶಕ್ತಿಯುಳ್ಳ ವ್ಯಕ್ತಿಯೇ ಅದನ್ನು ಬರೆದಿರಬೇಕು!

○ ○ ○

ಒಟ್ಟಿನ ಮೇಲೆ ಅವಿಶ್ವಾಸ ಠರಾವಿಗೆ ಸದಸ್ಯರ ಬೆಂಬಲವಿಲ್ಲವೆಂಬಭಿಪ್ರಾಯವನ್ನು ಉಂಟುಮಾಡಲಾಯಿತು. ಸದಸ್ಯರು ಗುಪ್ತವಾಗಿ ಮತಕೊಡದೆ ಬಹಿರಂಗವಾಗಿ ಕೊಟ್ಟರಂತೆ. ಸುಮಾರು ೨೯ ಮಂದಿ ಮೊದಲೇ ಕೊಟ್ಟ ಭಾಷೆಗೆ ತಪ್ಪಲಿಲ್ಲವೆಂಬುದನ್ನೂ, ೧೫ಕ್ಕಿಂತಲೂ ಮಿಕ್ಕಿರುವ ಸದಸ್ಯರು ತಾಟಸ್ಥ್ಯಭಾವವನ್ನೂ ಪ್ರದರ್ಶಿಸಿದರು. ೭ ಮಂದಿ ಅಪನಂಬಿಕೆಯನ್ನು ಸೂಚಿಸಿದರು. ಒಟ್ಟು ೬೪ ಸದಸ್ಯರಿದ್ದ ಸಭೆಯಲ್ಲಿ ೩೫ ಮಂದಿ ಅಪನಂಬಿಕೆ, ಅರ್ಧ ನಂಬಿಕೆಯನ್ನು ತೋರಿಸಿರುವುದನ್ನು ನೋಡುವಾಗ ಅಂತರಂಗದ ಕತೆಯು ಬಹಿರಂಗಕ್ಕಿಂತ ತೀರಾ ವ್ಯತ್ಯಾಸವಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಸಿರಿಯೊಡನೆ ಯಶೋರಾಣಿಯು ಜೊತೆಯಲ್ಲಿಯೇ ಇರುತ್ತಾಳೆಂಬುದು ಸರ್ವಸಾಮಾನ್ಯರ ಮಾತು.

**ಹಳ್ಳಿಗರೊಡನೆ ಸಹಾನುಭೂತಿ.**

ಇತ್ತೀಚೆಗೆ ನಡೆದ ಜಿಲ್ಲಾ ಬೋರ್ಡು ನೌಕರರ ಪರಿಷತ್ತಿನಲ್ಲಿ ಬೋರ್ಡಿನ ಅಧ್ಯಕ್ಷರೂ ಅಂದಿನ ಸಭಾಧ್ಯಕ್ಷರೂ ಆಗಿದ್ದ ಸನ್ಮಾನ್ಯ ಡಾ| ಕೆ. ವಿಠಲ ಶೆಟ್ಟರು—"ಹಳ್ಳಿಗಳಲ್ಲಿ ರೈತರು ಬಹಳ ಕಷ್ಟಪಡುತ್ತಿದ್ದಾರೆ. ಅವರು ಸರಕಾರಕ್ಕೆ ತೆರುವ ಪ್ರತಿಯೊಂದು ರೂಪಾಯಿಗೆ ಅರ್ಧಾಣೆಯ ಪ್ರಯೋಜನವನ್ನು ಹೊಂದುತ್ತಿಲ್ಲ"ಎಂದು ಹೇಳಿ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿರುವುದಕ್ಕೆ ಅವರಿಗೆ ಹಳ್ಳಿಗರು ಋಣಿಗಳಾಗಿರಬೇಕು. ಆದರೆ ಜಿಲ್ಲಾ ಬೋರ್ಡಿಗೆ ಕೊಡುವ ತೆರಿಗೆಯಲ್ಲಿ ಎಷ್ಟಾಣೆಯ ಪ್ರಯೋಜನವು ತೆರಿಗೆದಾರರಿಗೆ ಸಿಕ್ಕುತ್ತಿದೆ?

**ಕಾಂಗ್ರೆಸ್ ಚೆಯರ್‌ಮ್ಯಾನರ ಸಂಶಯ!**

ಮಂಗಳೂರು ಮ್ಯುನಿಸಿಪಾಲಿಟಿಯು ಶಾಲೆಗಳಲ್ಲಿ ರಾಷ್ಟ್ರಧ್ವಜವಂದನೆಯ ಕ್ರಮವನ್ನು ಜಾರಿಗೆ ತರಬೇಕೆಂಬ ಒಂದು ನಿರ್ಣಯವನ್ನು ಒಬ್ಬ ಕೌನ್ಸಿಲರರು ಅಲ್ಲಿಯ ಚೆಯರ್‌ಮ್ಯಾನರಿಗೆ ಕಳುಹಿಸಿದ್ದರೆಂದೂ, ಸರಕಾರದವರು ಅದಕ್ಕೆ ಆಕ್ಷೇಪಿಸಲಾರರೇ ಎಂಬ ಸಂಶಯದಿಂದ ಕಾಂಗ್ರೆಸ್ ಮಂತ್ರಿಗಳಿಗೆ ಅವರು ಅದನ್ನು ಕಳುಹಿಸಿರುತ್ತಾರೆಂದೂ ಒಂದು ಅನಧಿಕೃತ ವಾರ್ತೆ. ಇದು ಸತ್ಯವಾದರೆ ಈ "ಸಂಶಯ"ಕ್ಕೆ ಕಾಂಗ್ರೆಸ್ ಚೆಯರ್‌ಮ್ಯಾನರು ಒಳಗಾಗಿರುವುದಕ್ಕಾಗಿ ಅವರನ್ನಭಿನಂದಿಸಬೇಕಾಗಿದೆ.

**ಸಂತೋಷದ ಸಂಗತಿ.**

'ಕಾಂಗ್ರೆಸ್ ಮನೋವೃತ್ತಿಯ' ಮಂಗಳೂರಿನ ಮ್ಯುನಿಸಿಪಲ್ ಕೌನ್ಸಿಲಿನಲ್ಲಿ ಮಹಾತ್ಮಾಜಿಯವರ ತೈಲಚಿತ್ರವನ್ನಿಡಬೇಕೆಂಬ ನಿರ್ಣಯವನ್ನು ತಂದ ಜನಪ್ರೀತ ಕಾಂಗ್ರೆಸ್ ಭಕ್ತರಾದ ಡಾ|| ಗಿರಿಧರ ರಾಯರನ್ನು ಅಭಿನಂದಿಸಬೇಕಾಗಿದೆ. ಈ ನಿರ್ಣಯವು ೧೯೩೭ರಲ್ಲಾದುದನ್ನು ನೋಡುವಾಗ ನಮ್ಮ ರಾಷ್ಟ್ರೀಯತೆಯು ಪ್ರಗತಿಪಥದಲ್ಲಿ ನಾಗಾಲೋಟದಿಂದ ಮುಂದೋಡುತ್ತಿದೆಯೆಂದು ಸ್ಪಷ್ಟವಾಗುತ್ತದೆ.

**ಶಿಸ್ತಿನ ಪ್ರಪಂಚದಲ್ಲಿ**

ನೆರೆಬಂದು ಇಳಿದ ಬಳಿಕ ಕೂಡಾ ಅದರ ಸಂಜ್ಞೆಗಳು ಕಾಣಿಸುತ್ತವೆಯೆಂಬುದು ಇತ್ತೀಚೆಗಿನ ನೆರೆಯಿಂದ ಹೆಚ್ಚಿನವರಿಗೆ ತಿಳಿದಿರಬಹುದು. ಮೊನ್ನೆ ಮೊನ್ನೆ ನಡೆದ ಚುನಾವಣೆಯ ಬಿರುಗಾಳಿಯ ಹೊಡೆತದ ಪರಿಣಾಮವು ಇನ್ನೂ ನೆಟ್ಟಗಾಗಲಿಲ್ಲ. ಕಳೆದ ಜಿಲ್ಲಾ ಬೋರ್ಡಿಗೆ ಕಾಂಗ್ರೆಸ್ ಸದಸ್ಯರನ್ನು ಶಿಫಾರಸು ಮಾಡುವ ಕಾಲದಲ್ಲಿ ಉಡುಪಿಯ ತಾ. ಕಾಂ. ಕಮಿಟಿಯ ಕಾರ್ಯಕಾರೀ ಮಂಡಲಿಯ ಸದಸ್ಯತನಕ್ಕೆ ಅರ್ಧ ಡಜನು ಸದಸ್ಯರು ರಾಜೀನಾಮೆಗಳನ್ನು ಕಳುಹಿಸಿದ ಸುದ್ದಿಯು ಬಹಿರಂಗವಾಗಿತ್ತಷ್ಟೆ. ಅವುಗಳು ಸ್ವೀಕರಿಸಲ್ಪಟ್ಟಿದ್ದುವೇ ಎಂಬ ವಿಚಾರವು ಈ ತನಕ ಅಂತರಂಗದಲ್ಲಿತ್ತು. ಆದರೆ ಇತ್ತೀಚೆಗೆ ನಡೆದ ಸಭೆಯಲ್ಲಿ ಆ ಪ್ರಶ್ನೆ ಬಂತಂತೆ. ರಾಜೀ ಅರ್ಜಿ ಹಿಂತೆಗೆವ ಪ್ರಸಂಗ ಬಂದಾಗ 'ಜಿಲ್ಲಾ ಬೋರ್ಡಿನ ಉಡುಪಿ ಸರ್ಕಲಿನ ಚುನಾವಣೆಯ ನಿಮಿತ್ತ ಅವರು ರಾಜಿನಾಮೆಯಿತ್ತದ್ದಾದರೆ ಅವರ ಮೇಲೆ ನಾಲ್ಕೈದು ವರುಷಗಳ ತನಕ ಶಿಸ್ತು ಜ್ಯಾರಿ ಮಾಡುವಂತೆ ಜಿಲ್ಲಾ ಕಮಿಟಗೆ ಶಿಫಾರಸು ಮಾಡಬೇಕೆ'ಂದು ಮಾಜಿ ಅಧ್ಯಕ್ಷರಾದ ಶ್ರೀ. ಪಾಂಗಾಳ ಮಂಜುನಾಥ ನಾಯ್ಕರು ಹೇಳಿದರಂತೆ.

ಅವರು ರಾಜೀನಾಮೆ ಕೊಟ್ಟಿದ್ದು ಅದಕ್ಕಾಗಿ ಅಲ್ಲ. ಎಂದಿಗೂ ಅಲ್ಲ. ಕೇವಲ ನ್ಯಾಯಕ್ಕಾಗಿ. ಅದಕ್ಕೂ ಅವರ ಮೇಲೂ, ಶಿಸ್ತೇ? ಎಚ್ಚರಿಕೆ ಕೊಟ್ಟರೆ ಸಾಕೆಂದು ಕೆಲವು ಸದಸ್ಯರು ಹೇಳಿದರಂತೆ. ಅದು ಕೂಡಾ ಅವಶ್ಯವಿದ್ದಿಲ್ಲ. ಶಿಸ್ತು ಜಾರಿಮಾಡುವಾಗ ಕಾಲ, ವ್ಯಕ್ತಿ ಮೊದಲಾದುವುಗಳನ್ನು ನೋಡಬೇಡವೆ?

## ಕಾಫಿ ಹೊಟೆಲುಗಳಲ್ಲಿ—

ಹೌದು ಕಾಫಿ ಹೊಟೆಲುಗಳಲ್ಲಿಯೇ! ಹಿಂದಿನ ಕತೆಯಿದಲ್ಲ, ಇಂದಿನದು. ಹಳ್ಳಿಗಳಲ್ಲಿ ಮಾತ್ರವಲ್ಲ. ಪಟ್ಟಣಗಳಲ್ಲಿ ನಡೆಯುವ ಕತೆ: ಜಾತಿವ್ಯತ್ಯಾಸದ ಭೂತವು ಸಾರ್ವಜನಿಕ ಪಾನಗೃಹಗಳಲ್ಲಿ ಕೂಡಾ ೧೯೩೮ರಲ್ಲಿ ನರ್ತಿಸುತ್ತಿರುವುದು ಶೋಚನೀಯವಾಗಿದೆ. ಹೋದೊಡನೆಯೇ "ಗೋಲ್", "ಪೂಲ್" ಎಂಬ ಕೂಗುಗಳು! ಒಂದೇ ಮೇಜಿನಲ್ಲಿ ಆರು ವಿಧದ ಗ್ಲಾಸುಗಳು!! ಒಂದೊಂದು ಜಾತಿಗೆ ಒಂದೊಂದು ವಿಧದ ಗ್ಲಾಸುಗಳಂತೆ. ಮಂಗಳೂರಿನ ಕೆಲವು ಹೊಟೆಲುಗಳ ಮಾಳಿಗೆಗೆ ಕೆಲವು ಜಾತಿಯವರಿಗೆ ಪ್ರವೇಶವಿಲ್ಲ. ಒಮ್ಮೊಮ್ಮೆ ಅರ್ಧದಲ್ಲಿಯೇ ಕೊಟ್ಟ ಗ್ಲಾಸನ್ನು ಹಿಂದೆ ಕೊಂಡು ಹೋಗಿ ಬೇರೆ ವಿಧದ ಗ್ಲಾಸಿನಲ್ಲಿ ಕಾಫಿ ಇತ್ಯಾದಿಗಳು ಬರುವುದುಂಟು. ಕುಡಿಯುವವರ ಮನಸ್ಸನ್ನು ನೋಯಿಸಿಯೂ ಗ್ಲಾಸಿನ ಜಾತಿಯ ಪಾವಿತ್ರ್ಯವನ್ನು ಕಾಯುವ ಯತ್ನ. ಈ ರೋಗವನ್ನು ಮಂಗಳೂರಿನಂತಹ ಪ್ರಸಿದ್ಧ ಪಟ್ಟಣದ ಪ್ರಾಮುಖ್ಯ ಹೊಟೆಲುಗಳು ಸಹಿಸಿಕೊಂಡಿರುವುದು ಬೇಸರದ ಸಂಗತಿಯಾಗಿದೆ. ಈ ಸಾಂಕ್ರಾಮಿಕ ವ್ಯಾಧಿಯು ಊಟದ ಹೊಟೆಲುಗಳಲ್ಲಿಯೂ ಹಬ್ಬಿದೆ. ಸಂಬಂಧಪಟ್ಟವರು ಈ ತರದ ವ್ಯತ್ಯಾಸಗಳನ್ನು ಹೋಗಲಾಡಿಸುವುದು ಅವಶ್ಯವಲ್ಲವೆ?

## ಜಿಲ್ಲಾ ಬೋರ್ಡಿನ ವಿಶೇಷ ಸಭೆಯಲ್ಲಿ!

ವಿಶೇಷ ಸಭೆಯಲ್ಲಿ ಏನಾದರೊಂದು ವಿಶೇಷವು ಇದ್ದೇ ಇರಬೇಕಲ್ಲ. ವಿದ್ಯಾಸಮಿತಿಗೆ ಸದಸ್ಯರಲ್ಲದಿದ್ದವರನ್ನು ಆರಿಸುವ ಪ್ರಸಂಗವು ಬೋರ್ಡು ಸಭೆಯಲ್ಲಿ ಬಂತು. ಜಿಲ್ಲಾ ಕಾಂಗ್ರೆಸ್ ಕಮಿಟಿಯ ಜನರಲ್ ಸೆಕ್ರೆಟರಿಯವರಾದ ಶ್ರೀ. ಕೆ. ಕೆ. ಶೆಟ್ಟರು ಕಾಂಗ್ರೆಸ್ ಪಕ್ಷದ ಮುಖಂಡರಿಗೆ ತನ್ನ ಉಮೇದ್ವಾರಿಕೆಯನ್ನು ತಿಳಿಸಿದರು. ಇವರನ್ನು ಡಾ| ಪಿ. ಜಿ. ಆಚಾರ್ಯರು ಸೂಚಿಸಿದರು. ಮಿ| ಫೆರ್ನಾಂದೀಸರು ಅನುಮೋದಿಸಿದರೂ, ಥಕ್ಕನೆ ಸ್ಫೂರ್ತಿ ಬಂದಂತಾಗಿ "ತಿಳಿಯದೆ ಅನುಮೋದಿಸಿದೆ" ಎಂಬ ಸಾರಾಂಶದ ಮಾತನ್ನಾಡಿದರು. ಅನುಮೋದಿಸುವಾಗ ತಿಳಿಯದೆ ತಪ್ಪಿ ಬೀಳುವ ಇವರಿಗಾಗಿ ಸಹಾನುಭೂತಿಯನ್ನು ವ್ಯಕ್ತಪಡಿಸಲೇ ಬೇಕು.

೦೦೦

ಶ್ರೀ. ಶೆಟ್ಟರು ಜನರಲ್ ಸೆಕ್ರೆಟರಿಯರಾದರೂ ಕಾಂಗ್ರೆಸ್ ಪಕ್ಷದವರು ಬೇರೆಯವರ ಹೆಸರನ್ನು ಸೂಚಿಸಿದರು. ಪ್ರಾಯಶಃ ಶೆಟ್ಟರ ಕಾಂಗ್ರೆಸಿಗೂ ಪಕ್ಷದ ಕಾಂಗ್ರೆಸಿಗೂ ಯಾವುದೋ ಒಂದು ತರದ ವ್ಯತ್ಯಾಸವಿರಬೇಕು. ಇಲ್ಲದಿದ್ದರೆ ಈ ವಿಷಮಪರಿಸ್ಥಿತಿಯುಂಟಾಗುತ್ತಿದ್ದಿಲ್ಲ. ಶೆಟ್ಟರು ತನ್ನ ಉಮೇದ್ವಾರಿಕೆಯನ್ನು ಹಿಂತೆಗೆಯಬೇಕೆಂದು ಭಾರೀ ಸೂಚನೆಗಳಾದುವು. ಶೆಟ್ಟರು ಗಟ್ಟಿಯಾಗಿ ನಿಂತು ತಮ್ಮ ನಿರ್ಧಾರವನ್ನು ಬದಲಾಯಿಸಲಿಲ್ಲ. ಕೂಡಲೆ ಪ್ರಾರಂಭವಾಯಿತು 'ಕೆನ್ವಾಸ್'. ಈ ಕೆನ್ವಾಸಿನಿಂದಾಗಿ ಕುರ್ಚಿಗಳು ತುಂಬಾ ಶಬ್ದ ಮಾಡಬೇಕಾಯಿತು. ಕೊನೆಗೆ ತರುಣ ಮಿತ್ರರ ಸೂಚನೆಯಂತೆ ಶ್ರೀ. ಶೆಟ್ಟರು ತಮ್ಮ ಉಮೇದ್ವಾರಿಕೆಯನ್ನು ಹಿಂತೆಗೆದು ಯುವಕರ ಮಾತನ್ನು ಗೌರವಿಸಿ ಯುವಕರಲ್ಲಿರುವ ಐಕ್ಯವನ್ನು ವ್ಯಕ್ತಪಡಿಸಿದರು. ಯುವಕರ ಸಂಘಗಳು ನಮ್ಮ ಜಿಲ್ಲೆಯಲ್ಲಿದ್ದರೆ ಶ್ರೀ. ಶೆಟ್ಟರನ್ನು ಅಭಿವಂದಿಸಬೇಕೆಂದು ಸೂಚನೆ. ಜಿಲ್ಲಾ ಕಾಂಗ್ರೆಸ್ ಪಕ್ಷದಲ್ಲಿ ಹೀಗಾಗಲು ಕಾರಣವೇನೆಂದು ಅಧಿಕಾರಿಗಳಿಗೇ ಗೊತ್ತು. ಇದರ ಅಂತರಂಗವು ಬೇಗನೆ ಬಹಿರಂಗವಾಗಬಹುದೇ?

## ಮಂಗಳೂರಿನ ಬೀಡಿ ಲೇಬರ್ ಯೂನಿಯನಿನ ಅವ್ಯವಸ್ಥೆ?

ಈ ಯೂನಿಯನಿನ ಚಟುವಟಿಕೆಗಳು ಸಾಗುತ್ತಿಲ್ಲವೆಂದೂ, ಶ್ರೀಮತಿ ಕಮಲಾದೇವಿಯವರು ಸ್ವಲ್ಪ ಸಮಯದ ಹಿಂದೆ ಉತ್ಸಾಹದಿಂದ ಪ್ರಾರಂಭಿಸಿದ ಸ್ಟಡಿ ಕ್ಲಾಸ್, ರಾತ್ರಿ ಶಾಲೆ ಮೊದಲಾದುವುಗಳು ಈಗ ನಡೆಯುವುದಿಲ್ಲವೆಂದೂ, ಯೂನಿಯನಿನ ಮೇಲ್ವಿಚಾರ ನೋಡುವವರಿಲ್ಲವೆಂದೂ ಒಂದು ಬಾತ್ಮಿ. ಸದ್ಯಕ್ಕೆ ಇದನ್ನು ನಂಬಲಾಗದಿದ್ದರೂ, ಕೆಲವು ಸದಸ್ಯರು ಹೇಳಿದ ವಿಷಯವನ್ನು ಕೇಳುವಾಗ ನಂಬದಿರಲೂ ಆಗುವುದಿಲ್ಲ. ಶ್ರೀಮತಿ ಕಮಲಾದೇವಿ ಮತ್ತು ಸಂಬಂಧಪಟ್ಟ ಇನ್ನಿತರರು ಇದರ ಕುರಿತು ತಿಳಿಸಿದ್ದರೆ ಚೆನ್ನಾಗುತ್ತಿತ್ತು!

—K. H.

## ಫೆಡರೇಶನಿನ ಕುರಿತು ಕಾಂಗ್ರೆಸಿಗೆ
# ಬ್ರಿಟಿಷ್ ಸರಕಾರದ ಆಶ್ವಾಸನೆ

### ಶರ್ತಗಳ ವಿವರ

ಭಾರತದ ರಾಜಕೀಯ ವಾತಾವರಣದಲ್ಲಿ ಮಹತ್ವದ ಆಂದೋಲನವನ್ನುಂಟು ಮಾಡಿದ ಫೆಡರೇಶನಿನ ಸಮಸ್ಯೆಯನ್ನು ಬಗೆಹರಿಸಿದಂತಾಯಿತೆಂದು ತಿಳಿದು ಬರುತ್ತದೆ. ಈಗಾಗಲೇ ಲಂಡನಿನಲ್ಲಿ ಈ ಕುರಿತು ಮಹತ್ವದ ಚರ್ಚೆಗಳು ನಡೆಯುತ್ತಿವೆ. ಕಾಂಗ್ರೆಸು ಫೆಡರಲ್ ಯೋಜನೆಗೆ ಸಮ್ಮತಿಯನ್ನೀಯುವಂತೆ ಮಾಡಲು ಬ್ರಿಟಿಷ್ ಸರಕಾರವು ಈ ಕೆಳಗಿನ ಆಶ್ವಾಸನೆಗಳನ್ನೀಯಲು ಸಿದ್ಧವಿರುವುದೆಂದು ವಿಶ್ವಸನೀಯವಾಗಿ ತಿಳಿದುಬರುತ್ತದೆ:—

೧ ಸಂಸ್ಥಾನಗಳಲ್ಲಿ ಒಂದು ತರದಪ್ರಜಾಸತ್ತೆಯನ್ನು ಸ್ಥಾಪಿಸಿಬಿಟ್ಟು ಫೆಡರಲ್ ವಿಧಾಯಕ ಸಭೆಗೆ ಸಂಸ್ಥಾನಗಳಿಂದ ಪ್ರತಿನಿಧಿಗಳನ್ನು ಆರಿಸುವಾಗ ಪ್ರಜೆಗಳಿಗೆ ಕೂಡಾ ಅದರಲ್ಲಿ ಕೊಂಚ ಹಕ್ಕಿರಬೇಕೆಂದು ಬ್ರಿಟಿಷ ಸರಕಾರವು ಒತ್ತಾಯಪಡಿಸುವುದು.

೨. ದೇಶರಕ್ಷಣೆ ಮೊದಲಾದ ವಿಶೇಷಾಧಿಕಾರಗಳಲ್ಲಿ ವೈಸರಾಯರು ಫೆಡರಲ್ ಮಂತ್ರಿಗಳ ಸಲಹೆಯನ್ನು ಪಡೆಯಬೇಕು ಮತ್ತು

೩. ಬ್ರಿಟಿಷ್ ಸರಕಾರವು ಭಾರತ ಸಂರಕ್ಷಣಾ ಖರ್ಚಿನಲ್ಲಿ ಒಂದು ಭಾಗವನ್ನು ತಾನೇ ವಹಿಸಿಕೊಳ್ಳುವುದು.

ಈ ಅಶ್ವಾಸನೆಯು ತುಂಬಾ ಚರ್ಚಿಸಲ್ಪಟ್ಟ ಬಳಿಕ ಕೊಡಲು ನಿಶ್ಚೈಸಲ್ಪಟ್ಟಿತೆಂದೂ, ಈ ಚರ್ಚೆಯಲ್ಲಿ ಮಹಾತ್ಮಾ ಗಾಂಧಿಯವರೇ ಮೊದಲಾದ ಕಾಂಗ್ರೆಸ್ ಧುರೀಣರೂ, ಲಾರ್ಡ ಲೋಥಿಯಾನ್ ಮತ್ತು ಲಾರ್ಡ್ ಸಾಮ್ಯುವೆಲ್‌ರವರು ಕಳೆದ ಬಾರಿ ಭಾರತಕ್ಕೆ ಬಂದಾಗ ಭಾಗವಹಿಸಿದರೆಂದೂ ತಿಳಿಯಲಾಗಿದೆ. ಲಂಡನಿನಲ್ಲಿ ಶ್ರೀ ಭೂಲಾಭಾಯಿ ದೇಸಾಯಿಯವರು ಲಾರ್ಡ್ ಹೆಲಿಫೇಕ್ಸ್, ಲೋಥಿಯಾನ್ ಮತ್ತು ಝೆಟ್ಲೆಂಡರೊಡನೆ ಈ ಕುರಿತು ಇನ್ನಷ್ಟು ಚರ್ಚಿಸಿ ಸ್ಪಷ್ಟೀಕರಿಸಿರುವರೆಂದೂ, ಈ ಕುರಿತು ಜವಾಹರರೊಡನೆ ಕೂಡಾ ಲಂಡನಿನಲ್ಲಿ ಹೇಳಿರುವರೆಂದೂ ವಿಶ್ವಸನೀಯವಾಗಿ ತಿಳಿದುಬರುತ್ತದೆ.

---

## ಸಾದರ ಸ್ವೀಕಾರ

### ಕನ್ನಡನಾಡಿನ ಮಿಂಚಿದ ಮಹಿಳೆಯರು

ಬರೆದವರು: ದೇಸಾಯಿ ಪಾಂಡುರಂಗರಾಯರು ಎಂ. ಎ.

ಕರ್ನಾಟಕಕ್ಕೆ ಚಿರಪರಿಚಿತರಾದ ಶ್ರೀ ಬುರ್ಲಿ ಬಿಂದು ಮಾಧವರ ಸಂಪಾದಕತ್ವದಲ್ಲಿ ಹೊರಡುವ "ಮಿಂಚಿನ ಬಳ್ಳಿ"ಯ ಮೂರನೆ ಕುಡಿ. 1/8 ಕ್ರೌನ್, 186 ಪುಟಗಳು. ಎಂಟಿಕ್ ಕಾಗದದ ಉಪಯೋಗ. ಇಷ್ಟು ಪುಟಗಳುಳ್ಳ ಪುಸ್ತಕಕ್ಕೆ ಒಂದು ರೂಪಾಯಿ ಕ್ರಯ ಹೆಚ್ಚಲ್ಲ. ಮೋಹನ ಪ್ರೆಸ್ಸಿನವರ ಸುಂದರ ಮುದ್ರಣ. ಪುಸ್ತಕ ದೊರೆಯುವ ಸ್ಥಳ: ಮಿಂಚಿನಬಳ್ಳಿ ಚಾವಡಿ, ದೇಸಾಯಿ ಓಣಿ, ಧಾರವಾಡ. (ವಿಮರ್ಶೆ—ಯಥಾವಕಾಶ)

# ವಿಶ್ವ ವಿಚಾರ

## ಟರ್ಕಿ-ಬ್ರಿಟನ್ ಸಖ್ಯ



ಜೆಕೊಸ್ಲೊವೇಕಿಯದ ಪ್ರಧಾನ ಮಂತ್ರಿಗಳಾದ
**ಡಾ| ಹೊಝ್ಝಾರವರು.**

ಟರ್ಕಿ ಮತ್ತು ಗ್ರೇಟ್ ಬ್ರಿಟನ್‌ಗಳೊಳಗೆ ನಡೆಯುತ್ತಲಿರುವ ಆರ್ಥಿಕ ಮಾತುಕತೆಗಳನ್ನು ಯುರೋಪು ತುಂಬಾ ಲಕ್ಷ್ಯಗೊಟ್ಟು ನೋಡುತ್ತಿದೆ. ಇತ್ತೀಚೆಗೆ ಇವೆರಡು ರಾಷ್ಟ್ರಗಳೊಳಗೆ ನಡೆದ ಒಪ್ಪಂದದ ಫಲಿತಾಂಶವಾಗಿ ಬ್ರಿಟನು ಟರ್ಕಿಗೆ ಹದಿನಾರು ಮಿಲಿಯ ಪವನುಗಳನ್ನು ಸಾಲವಾಗಿ ಕೊಟ್ಟದೆ. ಇಟೆಲಿಯು ಭೂಮಧ್ಯ ಪ್ರಾಂತ್ಯದಲ್ಲಿ ಪ್ರಬಲವಾಗುತ್ತಿರುವುದೂ, ಜರ್ಮನಿಯು ದಕ್ಷಿಣ ಯುರೋಪಿನಲ್ಲಿ ತನ್ನ ಶಕ್ತಿಯನ್ನು ಹೆಚ್ಚಿಸುತ್ತಿರುವುದೂ, ಈ ಮೈತ್ರಿಗೆ ಕಾರಣವಾಗಿದೆ. ರಷ್ಯ ಮತ್ತು ಟರ್ಕಿಗಳೊಳಗಿನ ವಾಣಿಜ್ಯ ಸಂಬಂಧವನ್ನು ಕಡಿದು ಹಾಕುವುದೂ ಬ್ರಿಟನಿನ ಅಂತರಂಗದ ಆಶೆಯಾಗಿದೆ. ಜರ್ಮನಿಯ ಮುನ್ನಡೆಯನ್ನು ತಡೆದು ಯುರೋಪಿನಲ್ಲಿ ಹಿಟ್ಲರನ ಹಾವಳಿಯನ್ನು ನಿಲ್ಲಿಸುವುದು ಲಂಡನಿನ ನವಧೋರಣೆಯ ರಹಸ್ಯವಾಗಿದೆ.

೦ ೦ ೦

## ಆಸ್ಟ್ರಿಯದ ರೂಪ ವ್ಯತ್ಯಾಸ!

ಆಸ್ಟ್ರಿಯವನ್ನು ನಾಝೀ ಜರ್ಮನಿಯಂತೆ ಮಾಡಲು ಸರ್ವ ಯತ್ನಗಳೂ ನಡೆಯುತ್ತಿವೆ. ಜರ್ಮನಿಯ ವಿವಿಧ ನವಕಾಯಿದೆಗಳು ಆಸ್ಟ್ರಿಯದಲ್ಲೂ ಜಾರಿಮಾಡಲ್ಪಟ್ಟವೆ. 'ರಕ್ತ ಮತ್ತು ಕುಲ ರಕ್ಷಣಾ' ಮಸೂದೆಯು ಈಗಾಗಲೇ ಆಸ್ಟ್ರಿಯದಲ್ಲಿ ಜಾರಿಗೆತರಲ್ಪಟ್ಟದೆ. ಅದು ಜಾರಿಗೆ ಬಂದೊಡನೆಯೇ ವಿಯೆನ್ನಾ ನಗರದಲ್ಲಿ ಹದಿನೆರಡು ಆತ್ಮಹತ್ಯೆಗಳಾದವು ಸಾವಿರಾರು ಯೆಹೂದಿಯರು ಸೆರೆಮನೆಯನ್ನು ಪ್ರವೇಶಿಸಿ ನಾಝೀ ರಾಜ್ಯದ ಸುಖವನ್ನನುಭವಿಸುತ್ತಿದ್ದಾರೆ. ಏಳ್ನೂರು ಮಂದಿಯನ್ನು ಈಗಾಗಲೇ ಡಾಚ್ಚೋ ಸೆರೆಮನೆಗೊಯ್ದಿದ್ದಾರೆ. ಇಷ್ಟರತನಕ ಸುಮಾರು ೫ ಸಾವಿರಕ್ಕಿಂತಲೂ ಮಿಕ್ಕಿ ಯೆಹೂದಿಯರು ಕೈದು ಮಾಡಲ್ಪಟ್ಟದ್ದಾರೆಂದು ತಿಳಿದು ಬರುತ್ತದೆ. ಮಾಜಿ ಚಾನ್ಸೆಲರರಾದ ಕರ್ಟ್ ವೊನ್ ಶೂಸ್ನಿಗ್ಗರು ಸೆರೆಮನೆಯಲ್ಲಿದ್ದಾರೆಂದೂ ಇನ್ನು ಕೆಲವರು ಅವರು ದೂರಪ್ರದೇಶಕ್ಕೊಯ್ಯಲ್ಪಟ್ಟಿರುವರೆಂದೂ ಹೇಳುತ್ತಿದ್ದಾರೆ. ಆಸ್ಟ್ರಿಯವು ಈಗ ಹೆರ್ ಬ್ರುಕೆಲ್ ಎಂಬವನ ಆಳ್ವಿಕೆಯಲ್ಲಿದೆ. ಗುಪ್ತ ಪೋಲೀಸರ ಮುಖ್ಯಸ್ಥನಾದ ಹೆರ್ ಹಿಮ್ಲರನು ಆಸ್ಟ್ರಿಯದ ಶುದ್ಧೀಕರಣಮಾಡುತ್ತಿದ್ದಾನೆ. ಆಸ್ಟ್ರಿಯವನ್ನು "ಆಸ್ಟ್‌ಮಾರ್ಕ್" ಎಂಬ ಹೆಸರಿನಿಂದ ಕರೆಯುವ ಏರ್ಪಾಡು ನಡೆಯುತ್ತಿದೆ. ಮೊದಲಿನ "ಆಸ್ಟ್ರಿಯ"ದವರು ಇನ್ನಷ್ಟು ಕಠಿನವಾಗಿ ಕೆಲಸಮಾಡಬೇಕೆಂದು ಫೀಲ್ಡ್ ಮಾರ್ಷಲ್ ಗೋರಿಂಗರು ಇತ್ತೀಚೆಗೆ ಬುದ್ಧಿ ಹೇಳಿದ್ದಾರೆ.



ಸ್ಪೈನ್ ಸರಕಾರದ ವಿದೇಶ ಮಂತ್ರಿಗಳಾದ
**ಸೀನರ್ ಡೆಲ್ ವಯೊ.**

೦ ೦ ೦

## ಜೆಕೊಸ್ಲೊವೇಕಿಯದ ಸಮಸ್ಯೆ.

ಜೆಕೊಸ್ಲೊವೇಕಿಯದ ಸಮಸ್ಯೆಯು ಇನ್ನೂ ಬಗೆಹರಿಯಲಿಲ್ಲ. ಜರ್ಮನ್ ಪತ್ರಿಕೆಗಳು ಅದಕ್ಕೆ ವಿರೋಧವಾಗಿ ಪ್ರಬಲ ಪ್ರಚಾರ ಕಾರ್ಯವನ್ನು ನಡೆಸುತ್ತಿವೆ. ಡೆನ್ಯೂಬ್ ಪ್ರದೇಶವನ್ನು ಜರ್ಮನಿಯ ಪ್ರಭಾವಕ್ಕೊಳಗಾಗುವಂತೆ ಮಾಡಲು ಬ್ರಿಟನಿನ ಬೆಂಬಲವನ್ನು ಪಡೆಯುವ ಯತ್ನಗಳು ಜರ್ಮನಿಯಿಂದ ಮಾಡಲ್ಪಡುತ್ತಿವೆ. ಸುಡೇಟನ್ ಜೆಕೊಸ್ಲೊವೇಕಿಯದಲ್ಲಿ ಕೂಡಾ ಆಸ್ಟ್ರಿಯದಂತೆಯೇ ಚುನಾವಣೆಯಾಗಬೇಕೆಂಬ ಸೂಚನೆಯನ್ನು ಕಾರ್ಯರೂಪಕ್ಕೆ ತರುವ ಯತ್ನಗಳು ಸಹಾ ನಡೆಯುತ್ತಿವೆ. ಜರ್ಮನ್ ಪತ್ರಿಕೆಗಳು ಜೆಕ್ ಮತ್ತು ಸ್ಲೊವಾಕಾ ಪಂಗಡದವರೊಳಗೆ ಕಲಹವು ತಲೆದೋರಲು ಪ್ರಬಲ ಪ್ರಚಾರ ಮಾಡುತ್ತಿವೆ.




**ಯುರೋಪು ಖಂಡದ ಹೊಸ ಕಮ್ಮಾರ!**

ಬ್ರಟಿಸ್ಲಾವಾ ಎಂಬ ಜೆಕ್ ನಗರದಲ್ಲಿ ಜೆಕೊಸ್ಲೊವೇಕಿಯದ ಪ್ರಧಾನ ಮಂತ್ರಿಗಳಾದ ಡಾ| ಹಾರ್ಷುಾರವರ ಭಾಷಣವನ್ನು ದುರುಪಯೋಗಗೊಳಿಸಿ ಅದನ್ನು ಪ್ರಚಾರದ ಮಾಧ್ಯಮ್ಯವನ್ನಾಗಿ ಉಪಯೋಗಿಸುತ್ತಿದ್ದಾರೆ. ಡಾ| ಹಾರ್ಷುಾರವರು ಇತ್ತೀಚೆಗೆ ಮಾಡಿದ ಭಾಷಣದಲ್ಲಿ ಪ್ರತಿಯೊಬ್ಬ ಜೆಕ್ ಪ್ರಜೆಯೂ ಪ್ರಜಾಸತ್ತೆಯ ಹೆಸರಲ್ಲಾದರೂ ಅವ್ಯವಸ್ಥೆಯನ್ನು ತಂದೊಡ್ಡಬಾರದೆಂದು ಬಿನ್ನವಿಸಿದ್ದಾರೆ.

೦ ೦ ೦

## ಅರುವತ್ತನೆಯ ವಾರ್ಷಿಕೋತ್ಸವ.

ಜೆಕೊಸ್ಲೊವೇಕಿಯದ ಸೋಶಿಯಲ್ ಡೆಮಾಕ್ರೆಟಿಕ್ ಪಾರ್ಟಿಯ 60ನೆ ವಾರ್ಷಿಕೋತ್ಸವವು ಪ್ರೇಗಿನಲ್ಲಿ ಕಳೆದ ವಾರ ಜರಗಿತು. ಕಾಲುಮಿಲಿಯ ಜನರೂ ಸೊಕೊಲ್

ಸೈನ್ಯವೂ ಮೆರವಣಿಗೆಯಲ್ಲಿ ಭಾಗ ವಹಿಸಿ "ನಾವು ಸಿದ್ಧರು" ಎಂಬ ಕರೆಯನ್ನು ಮೊಳಗಿಸಿತು. ಈ ರಾಷ್ಟ್ರದಲ್ಲಿ ನಿರುದ್ಯೋಗವು ಪ್ರತಿ ತಿಂಗಳಲ್ಲೂ ಕಡಿಮೆಯಾಗುತ್ತಾ ಬರುತ್ತಿದೆ.

ೞ ೞ ೞ

**ಅಮೇರಿಕಕ್ಕೆ ಬ್ರಿಟನಿನ ಸಾಲ!**

ಕಾಲವೊಂದಿತ್ತು. ಆಗ ಬ್ರಿಟನು ಜಗತ್ತಿಗೇ ಸಾಲಕೊಡುತ್ತಿತ್ತು. ಆ ಕಾಲವೆಂದೋ ಕಳೆದು ಹೋಗಿ ಅಮೇರಿಕವು ಆ ಕೀರ್ತಿಯ ಛತ್ರ ಚಾಮರವನ್ನು ಹಿಡಿದುಕೊಂಡಿದೆ.

ಅಮೇರಿಕದ ಡಾಲರ್ ಅಂದರೆ ಎಷ್ಟೆಂದು ಗೊತ್ತಿದೆಯೆ? ಒಂದು ಡಾಲರಿನ ಬೆಲೆ ಸುಮಾರು ಮೂರು ರೂಪಾಯಿ. ಒಂದು ಬಿಲಿಯನ್ ಡಾಲರ್ ಎಂದರೆ ಎಷ್ಟೆಂದು ಬೇಗನೆ ತಿಳಿಯಲಾರದು. ಒಂದು ಬಿಲಿಯನ್ ಡಾಲರೆಂದರೆ ೧,೦೦೦ ಮಿಲಿಯ ಡಾಲರುಗಳು. ದಿನವೊಂದರ ೧೦೦ ಡಾಲರುಗಳಂತೆ (ಅಂದರೆ ೩೦೦ ರೂಪಾಯಿಗಳಂತೆ) ಖರ್ಚು ಮಾಡಿದರೆ ಒಂದು ಮಿಲಿಯ ಡಾಲರನ್ನು ಮುಗಿಸಲು ಸುಮಾರು ೧೬ ವರುಷಗಳು ಬೇಕಾಗುತ್ತವೆ. **ಇಂಥ ನಾಲ್ಕು ಬಿಲಿಯನ್ ಡಾಲರುಗಳಷ್ಟು ಸಾಲ ಭಾರತಕ್ಕಿದೆ ಯೆಂಬುದು ನಿಮಗರಿತಿದೆಯೆ?**

ಬ್ರಿಟನು ಅಮೇರಿಕಕ್ಕೆ ನಾಲ್ಕು ಬಿಲಿಯನ್ ಡಾಲರ್ ಸಾಲವನ್ನು ಪರಿಹರಿಸಬೇಕಾಗಿದೆ. ಇತ್ತೀಚೆಗೆ ಮೆಕ್ಸಿಕೋದಲ್ಲಿ ನಡೆದ ಎಣ್ಣೆ ಗನಿಗಳ ವಿಷಮ ಪರಿಸ್ಥಿತಿಗಾಗಿ ಮೆಕ್ಸಿಕೋ ಸರಕಾರವು ೨೫೦ ಮಿಲಿಯ ಡಾಲರುಗಳನ್ನು ಬ್ರಿಟಿಷ್ ಸರಕಾರಕ್ಕೆ ಕೊಡಬೇಕೆಂದು ಕೇಳಿತ್ತು. ಈ ಪರಿಹಾರ ದ್ರವ್ಯವನ್ನು ಅಮೇರಿಕವು ಕೊಡುವುದೆಂದೂ, ಬ್ರಿಟನು ಅಮೇರಿಕಕ್ಕೆ ಕೊಡಲಿರುವ ನಾಲ್ಕು ಮಿಲಿಯ ಡಾಲರುಗಳಿಗೆ ಇದನ್ನು ವಜಾ ಮಾಡುವುದೆಂದೂ ಅಮೇರಿಕವು ತನ್ನ ಕಾಂಗ್ರೆಸಿನಲ್ಲಿ ಸೂಚಿಸಿತ್ತು. ಹೀಗಾದರೆ ಬ್ರಿಟನು ಅಮೇರಿಕಕ್ಕೆ ಕೊಡುವ ಸಾಲದಲ್ಲಿ ೨೫೦ ಮಿಲಿಯ ಡಾಲರುಗಳು ಕಡಿಮೆಯಾದಂತಾಯಿತು.

**ಬ್ರಿಟನು ವೆಸ್ಟ್ ಇಂಡೀಸ್ ದ್ವೀಪವನ್ನು ಅಮೇರಿಕಕ್ಕೆ ಮಾರುವುದೆ?**

ಇತ್ತೀಚೆಗೆ ಬ್ರಿಟನ್ ಅಮೇರಿಕದ ವಿಮಾನ ಕೈಗಾರಿಕೆಯವರೊಂದಿಗೆ ೩೫ ಮಿಲಿಯ ಡಾಲರುಗಳಷ್ಟು ಬೆಲೆಬಾಳುವ ೪೦೦ ಯುದ್ಧ ವಿಮಾನಗಳನ್ನು ತಯಾರಿಸಿಕೊಡಬೇಕೆಂದಿದೆ. ಈ ವಿಮಾನಗಳು ಯುದ್ಧಕ್ಕಾಗಿ ಕೊಂಡುಕೊಳ್ಳಲ್ಪಡುತ್ತವೆಯೆಂಬುದರಲ್ಲಿ ನಿರ್ವಿವಾದ. ಜರ್ಮನಿಯು ಕೂಡಾ ಅಮೇರಿಕದೊಡನೆ ಜೆಪ್ಪೆಲಿನ್ ವಿಮಾನಗಳಿಗೆ ತುಂಬಲು ಹೀಲಿಯುಮನ್ನು ಕೇಳಿದೆ.

ಬ್ರಿಟನು ಈಗಾಗಲೇ ಅಮೇರಿಕಕ್ಕೆ ತುಂಬಾ ಸಾಲ ಕೊಡುವುದಿರುವಾಗ ಪುನಃ ೩೫ ಮಿಲಿಯ ಡಾಲರುಗಳನ್ನು ಸಾಲ ಕೊಡುವುದೆ? ಇದು ಪ್ರಾಮುಖ್ಯವಾದ ಪ್ರಶ್ನೆ. ಈ ಸಮಸ್ಯೆಯನ್ನು ಬಗೆಹರಿಸಲು ಅಮೇರಿಕವು ಒಂದು ಹೊಸ ಸೂಚನೆಯನ್ನು ಬ್ರಿಟನಿಗೆ ಮಾಡಲಿದೆ. ಅಮೇರಿಕದ ತೀರದಲ್ಲಿರುವ ವೆಸ್ಟ್ ಇಂಡೀಸ್ ದ್ವೀಪವನ್ನು ಬ್ರಿಟನು ಅಮೇರಿಕಕ್ಕೆ ಮಾರುವುದು. ಹೀಗಾದರೆ ಸಾಲದ ಒಂದಂಶವು ಪಾವತಿಯಾದಂತಾಗುತ್ತದೆ. ಹೀಗೆ ಮಾಡದೆ ಬ್ರಿಟನಿಗೆ ಗತ್ಯಂತರವಿಲ್ಲ. ಇದನ್ನು ನೋಡುವಾಗ ಬ್ರಿಟಿಷ್ ಸಾಮ್ರಾಜ್ಯವು ದಿನ ಹೋದಂತೆ ಕ್ಷಯವಾಗುತ್ತಾ ಬರುತ್ತಿದೆಯೆಂದು ಪಂಡಿತ ನೆಹರುಗಳು ಲಂಡನಿನಲ್ಲಿ ಆಡಿದ ಮಾತು ನಿಜವೆಂದು ಸ್ಪಷ್ಟವಾಗುತ್ತದೆ.

ೞ ೞ ೞ

**ಪೆಲೆಸ್ಟೈನ್—**

**ಇನ್ನೊಂದು ಸ್ಪೈನ್.**

ಬ್ರಿಟಿಷ್ ಸರಕಾರವು ಪೆಲೆಸ್ಟೈನಿನ ಇಂದಿನ ಅವ್ಯವಸ್ಥೆಗೆ ಮೂಲ ಕಾರಣವಾಗಿದೆ. ಇಪ್ಪತ್ತು ವರುಷಗಳ ಹಿಂದೆ, ಭಾರತದ ಜಾತೀಯ ನಿರ್ಣಯದಂತಹ 'ನ್ಯಾಶನಲ್ ಹೋಮ್ ಪೋಲಿಸಿ'ಯೆಂಬುದನ್ನು ಬ್ರಿಟಿಷ್ ಸರಕಾರವು ಪೆಲಸ್ಟೈನಿನಲ್ಲಿ ಜಾರಿಗೆ ತಂದಿತು. ಅಂದಿನಿಂದ ಯೆಹೂದಿಯರೊಳಗೂ ಅರಬರೊಳಗೂ ಕಲಹವು ಪ್ರಾರಂಭವಾಗಿದೆ. ಇತ್ತೀಚೆಗೆ ಅವ್ಯವಸ್ಥೆಯನ್ನು ನಿಲ್ಲಿಸಲು ಹೋದ ಟೆಕ್ನಿಕಲ್ ಕಮಿಷನ್ ಪರಿಸ್ಥಿತಿಯನ್ನು ಸುಧಾರಿಸದೆ ಇನ್ನಷ್ಟು ವಿಷಮಾವಸ್ಥೆಗೆ ತಂದೊಡ್ಡಿದೆ. ಈ ಕಮಿಷನ ಅರಬರ ಆಶಾಕಾಂಕ್ಷೆಗಳನ್ನು ನುಚ್ಚುನೂರುಗೊಳಿಸಿದೆ. ಇದರ ಅಧ್ಯಕ್ಷರು ಸರ್ ಜ್ಹೋನ್ ವುಡ್‌ಹೆಡ್ ಎಂಬವರು.

ಈಗ ಬ್ರಿಟಿಷರೊಡನೆ ಹಾಗೂ ಯೆಹೂದಿಯರೊಡನೆ ಪೆಲೆಸ್ಟೈನಿನ ಅರಬರು ಮಾಡುತ್ತಿರುವ ಯುದ್ಧವು ಸಾಮಾನ್ಯವಾದುದಲ್ಲ. ಇಟೆಲಿಯು ಪೆಲೆಸ್ಟೈನಿನ ಅರಬರ ಬ್ರಿಟಿಷ್ ವೈರತ್ವವನ್ನು ಹೆಚ್ಚಿಸಿದೆ. ಬ್ರಿಟಿಷರು ಪೆಲೆಸ್ಟೈನಿನಲ್ಲಿ ಅನುಸರಿಸುವ ಧೋರಣೆಯು ಅರ್ಥರಹಿತವಾದುದು.

# ಅಂತರಂಗ

**ಜುಲಾಯಿ ೨೪, ೧೯೩೮.**

## ಸ್ಪೈನ್ ಯುದ್ಧ

ಸ್ಪೈನಿನಲ್ಲಿ ನಡೆಯುತ್ತಿರುವ ಯುದ್ಧವು ಪ್ರಾರಂಭವಾಗಿ ಎರಡು ವರುಷಗಳಾದುವು. ಜನರಲ್ ಫ್ರೇಂಕನ ಪಕ್ಷವು ಪ್ರಬಲರಾಷ್ಟ್ರಗಳ ತಾಟಸ್ಥ್ಯ ಧೋರಣೆಯಿಂದ ಮತ್ತು ಇಟಲಿ ಜರ್ಮನಿಗಳ ಬೆಂಬಲದಿಂದ ಈ ತನಕ ಯಶಸ್ವಿಯಾಗಿದೆ. ನ್ಯಾಯಸಮ್ಮತವಾದ ಸ್ಪೈನ್ ಸರಕಾರಕ್ಕೆ ಪರರಾಷ್ಟ್ರಗಳು ಯುದ್ಧಸಾಮಗ್ರಿಗಳನ್ನು ಒದಗಿಸದಿರುವುದಿದ್ದರೂ ಇಷ್ಟರ ತನಕ ಸರಕಾರೀ ಪಕ್ಷವು ತನ್ನ ವಿರೋಧಿಗಳ ಧಾಳಿಯನ್ನು ಸಹಿಸಿರುವುದನ್ನು ನೋಡುವಾಗ ಅದರ ಶಕ್ತಿ ಮತ್ತು ಶಿಸ್ತು ಅಸಾಮಾನ್ಯವಾದುವುಗಳೆಂದು ವ್ಯಕ್ತವಾಗುತ್ತದೆ.

ಮೂರು ತಿಂಗಳುಗಳ ಹಿಂದೆ ರಿಪಬ್ಲಿಕಿನ ಪತನವು ಖಂಡಿತವೆಂಬಭಿಪ್ರಾಯವು ಬಲವಾಗುತ್ತಾ ಬಂತು. ಜನರಲ್ ಫ್ರೇಂಕನು ಹಲವು ಬ್ರಿಟಿಷ್ ಹಡಗುಗಳಿಗೆ ಬಾಂಬುಹಾಕಿಯಾದರೂ ಸಮುದ್ರಗಳಲ್ಲಿ ತನ್ನ ನಾವೆಗಳು ಕಾಯುವಂತೆ ಮಾಡಿದರೂ ಸರಕಾರವನ್ನು ಸೋಲಿಸಲು ಸಾಧ್ಯವಾಗಲಿಲ್ಲ ಯುದ್ಧವು ಕೊನೆಗೊಂಡಿತೆಂಬ ಮಾತಿನ ಬದಲು ಇನ್ನೂ ಒಂದೆರಡು ವರುಷಗಳತನಕ ನಡೆಯಬಹುದೆಂದು ಜನರಲ್ ಫ್ರೇಂಕನ ಸಮರ್ಥಕರೇ ಹೇಳಲಾರಂಭಿಸಿದ್ದಾರೆ.

ಈ ಪರಿಸ್ಥಿತಿಯುಂಟಾಗಲು ಮೂಲಕಾರಣವೆಂದರೆ ಈಗಿನ ರಿಪಬ್ಲಿಕ್ ಮಂತ್ರಿಮಂಡಲದ ಸಂಘಟನೆ ಮತ್ತು ಅವರ ದೃಢ ನಿರ್ಣಯವಾಗಿದೆ. ಫ್ರೇಂಕೋ ನಿಷ್ಕರುಣೆಯಿಂದ ಅಸಹಾಯ ಜನರಮೇಲೆ ಬಾಂಬೆಸೆದುದರಿಂದ ಸ್ವಾಭಾವಿಕವಾಗಿ ಹೆಚ್ಚಿನವರ ಸಹಾನುಭೂತಿಯು ಸರಕಾರದ ಮೇಲಿರುವಂತಾಯಿತು.

ಇಂದಿನ ಪರಿಸ್ಥಿತಿಯು ರಿಪಬ್ಲಿಕಿಗೆ ಅಷ್ಟೊಂದು ಹಿತಕಾರಿಯಾಗಿಲ್ಲ. ಫ್ರೇಂಕನ ಪಡೆಯು ಸ್ಪೈನಿನ ಪ್ರಾಮುಖ್ಯಾಂಶಗಳನ್ನು ಕೈವಶಪಡಿಸಿಕೊಂಡು ವೆಲೆನ್ಸಿಯವನ್ನು ಸ್ವಾಧೀನಪಡಿಸಲು ದಕ್ಷಿಣಾಭಿಮುಖವಾಗಿ ಹೋಗುತ್ತಿದೆ. ದಕ್ಷಿಣದಲ್ಲಿ ದಂಗೆಗಾರರು ಪ್ರಬಲರಾದರೆ ಸರಕಾರದ ಯತ್ನವು ಇನ್ನಷ್ಟೂ ಪ್ರಬಲವಾಗಬೇಕಾಗುತ್ತದೆ.

ದಂಗೆಗಾರರಿಗೆ ಸೀನರ್ ಮುಸ್ಸೋಲಿನಿಯು ವಿಮಾನಪಡೆ ಹಾಗೂ ನೌಕಾಪಡೆಯನ್ನು ಧಾರಾಳವಾಗಿ ಒದಗಿಸುತ್ತಿದ್ದಾನೆ. ಫ್ರೇಂಕೋ ಜಯಿಸಿದರೆ ತನ್ನ ಗೌರವವು ಉಳಿದಂತಾಗುತ್ತದೆಂಬ ಅಭಿಪ್ರಾಯವು ಮುಸ್ಸೋಲಿನಿಯಲ್ಲಿ ಬಲವಾಗಿದೆ. ಇತ್ತೀಚೆಗಿನ ತಾಟಸ್ಥ್ಯ ಒಪ್ಪಂದವು ಮುರಿದು ಹಾಕಲಿಕ್ಕಾಗಿಯೇ ಮಾಡಲ್ಪಟ್ಟಿರುವುದಾದುದರಿಂದ ಹಾಗೂ ಅಮೇರಿಕವು ರಿಪಬ್ಲಿಕಿಗೆ ಯುದ್ಧ ಸಾಧನಗಳನ್ನು ಕೊಡದಿರುವುದರಿಂದ ಸರಕಾರಕ್ಕೆ ಹೆಚ್ಚಿನ ತೊಡಕಾಗುವುದೆಂದು ಹೇಳಬೇಕಾಗಿದೆ.

ಇಂದಿನ ಪರಿಸ್ಥಿತಿಯನ್ನು ನೋಡುವಾಗ ಫ್ರೇಂಕನಿಗೆ ವಿಜಯವು ಸಿಗುವುದು ಖಂಡಿತವೆಂದು ಕಾಣುತ್ತದೆ. ಆದರೆ ಫ್ರೇಂಕನ ಪಡೆಯಲ್ಲಿಯೇ ಅಂತಃಕಲಹವು ತಲೆದೋರಿರುವುದರಿಂದ ಇನ್ನೊಂದು ವರುಷವಾಗುವುದರೊಳಗೆ ಅದು ಹರಿದು ಹಂಚಿಹೋದರೆ ರಿಪಬ್ಲಿಕಿಗೆ ಉಪಕಾರವಾದಂತಾದೀತು. ಸ್ಪೈನ್ ಯುದ್ಧದಲ್ಲಿ ಯಾವ ಪಕ್ಷವು ಜಯಿಸುವುದೆಂಬ ಪ್ರಶ್ನೆಗೆ ಉತ್ತರವು ಕಾಲಗರ್ಭದಲ್ಲಿದೆ.

## ನವಜಾಗ್ರತಿ

ಇಷ್ಟರತನಕ ಪುರುಷರು ಆಳುತ್ತಿದ್ದ ಸಾಮ್ರಾಜ್ಯಕ್ಕೆ ಸ್ತ್ರೀಯರು ಕಾಲಿಡುತ್ತಿರುವುದನ್ನು ನೋಡುವಾಗ ಸ್ತ್ರೀ ಪ್ರಪಂಚದಲ್ಲಿ ನವಜಾಗೃತಿಯುಂಟಾದಂತೆ ಕಾಣುತ್ತದೆ. ಒಬ್ಬ ಸ್ತ್ರೀಯು ಮಂತ್ರಿಯಾಗಿದ್ದಾರೆ. ಇನ್ನೊಬ್ಬರು ಪುರುಷರದೇ ಆಗಿದ್ದ ಪೋಲೀಸ್ ಡಿಪಾರ್ಟ್ಮೆಂಟಿನ ಒಂದು ಕೆಲಸವನ್ನು ವಹಿಸಿಕೊಂಡಿದ್ದಾರೆ. ಇತ್ತೀಚೆಗೆ ಅಹಮ್ಮದಾಬಾದಿನಲ್ಲಿ ನಡೆದ ಭಾರತ ಯುವತಿ ಸಂಘದಲ್ಲಿ ಒಬ್ಬ ಸ್ತ್ರೀ ಭಾಷಣವೀಯುತ್ತಾ ಒಂದು ಪ್ರಾಂತ್ಯವನ್ನೇ ಅವರಾಳ್ವಿಕೆಗೆ ಒಳಗಾಗುವಂತೆ ಮಾಡಬೇಕೆಂದು ಹೇಳಿ ಸ್ತ್ರೀಸಭಾಸದರನ್ನು ತಲೆದೂಗಿಸಿದರು. ಈ ಕೇಳಿಕೆಗೆ ಅವರು ಸ್ತ್ರೀಯರ ಇಂದಿನ ಸುಧಾರಿತ ಪರಿಸ್ಥಿತಿಯ ಆಧಾರಗಳನ್ನು ಕೊಟ್ಟಿದ್ದಾರೆ:—

೧. ಸ್ತ್ರೀಯರಲ್ಲಿ ಅನೈಕ್ಯವಿಲ್ಲ. ೨. ಮತ್ಸರವಿಲ್ಲ. ೩. ಅಧಿಕಾರ ಲಾಲಸೆಯಿಲ್ಲ. ಇದಕ್ಕೆ ಅವರು ಇನ್ನೂ ಕೆಲವು ಉದಾಹರಣೆಗಳನ್ನು ಕೊಟ್ಟಿರುತ್ತಾರೆ. ಪುರುಷರು ಇಷ್ಟರ ತನಕ ಹೋರಾಡಿದರೂ ಇನ್ನೂ ಸ್ವಾತಂತ್ರ್ಯವನ್ನು ಸಂಪಾದಿಸಲಿಲ್ಲ. ರೌಂಡ್‌ಟೇಬಲ್ ಪರಿಷತ್ತಿನಲ್ಲಿ ಸ್ವಾತಂತ್ರ್ಯದ ಬದಲು ಜಾತೀಯ ನಿರ್ಣಯವನ್ನು ಮಾಡಿಸಿದರು. ಮತ್ಸರವು ಹೆಚ್ಚಿರುವುದರಿಂದ ಅವರಿಗೆ ಏನನ್ನೂ ಮಾಡಲು ಸಾಧ್ಯವಿಲ್ಲ! ಪ್ರಾಯಶಃ ಪುರುಷರಿಗೆ ಮೇಲಿನ ವಿಷಯಗಳ ಕುರಿತು ಬೇರೆಯೇ ಅಭಿಪ್ರಾಯವಿರಬಹುದು!

# ಛಾಯಾ  ಲೋಕ

## ಅವಳಾರು ?

ಆ ನಟಿಯು ಹೊಲಿವುಡ್ಡಿನವರಿಗೆ ಆಶ್ಚರ್ಯವನ್ನುಂಟು ಮಾಡಿದ್ದಾಳೆ. ಕೆಲವೊಮ್ಮೆ ಆಕೆಯು ನಗುವಳು. ಹೆಚ್ಚಾಗಿ ಕಠಿನ ಮುಖಭಾವವನ್ನು ತೋರುವಳು. ಆದರೆ ಆಕೆಯು ಸ್ವಭಾವವಾವುದೆಂದು ಹೆಚ್ಚಿನವರಿಗರಿಯದು.

ಆಕೆಯು ಚತುರಳಾದೊಬ್ಬ ನಟಿ. ಅನೇಕ ಯಶಸ್ವೀ ಚಿತ್ರಗಳಲ್ಲಿ ಭಾಗ ವಹಿಸಿ, ತನ್ನ ಕಲೆಯ ಮಹತ್ವದಿಂದ ಜಗತ್ತನ್ನು ಬೆರಗುಗೊಳಿಸಿದ್ದಾಳೆ. ಈಗ ತನ್ನ ಕೀರ್ತಿಯನ್ನು ಳಿಸಿಕೊಳ್ಳಲು ಯತ್ನಿಸುತ್ತಿದ್ದಾಳೆ.

ಆಕೆಯು ಇತರ ನಟ ನಟಿಯರಂತಲ್ಲ. ಒಂದೇ ಪಾತ್ರವನ್ನಭಿನಯಿಸಿ ಅವಳು ಖ್ಯಾತಿಯನ್ನು ಪಡೆದಳು. ಅದರಿಂದಾಗಿ ಆಕೆಗೆ ಪ್ರಸಿದ್ಧ ಬಹುಮಾನವೊಂದು ದೊರಕಿತು.

ಆಕೆಯು ನಿಜವಾದ ಕಲಾವಿದಳೆಂದು ಅವಳ ಅಭಿನಯದಿಂದ ವ್ಯಕ್ತವಾಗುತ್ತದೆ. ಚಿತ್ರ ಬರೆಯುವುದು, ಸಂಗೀತ ಮತ್ತು ಕವನಗಳನ್ನು ಬರೆಯುವುದರಲ್ಲಿ ಆಕೆಗೆ ಬಹಳ ಇಷ್ಟ. ಈಗಲೂ ಅವಳು ತನ್ನ ಕಲಾಭಿಮಾನವನ್ನು ಬಿಡಲಿಲ್ಲ.

ಸ್ವಲ್ಪ ಕಾಲದ ಹಿಂದೆ ಆಕೆಯು ಒಬ್ಬನನ್ನು ಮದುವೆಯಾದಳು. ಆದರೆ ಅವನು ಅವಳ ಅಭಿನಯವನ್ನು ರಜತ ಪರದೆಯಲ್ಲಿ ಕಂಡು



ಧೂರ್ತಪಾತ್ರ ವಹಿಸುವುದರಲ್ಲಿ ಅಗ್ರಗಣ್ಯನೆನಿಸಿರುವ
**ಈಶ್ವರಲಾಲ್.**

ತನ್ನ ವೈವಾಹಿಕ ಸಂಬಂಧವನ್ನು ಕಳೆದು ಕೊಂಡನು.

ಚಲಚ್ಚಿತ್ರಾಭಿಮಾನಿಯೊಬ್ಬನು ಆಕೆಯನ್ನು ಹೊಲಿವುಡ್ಡಿಗೆ ಕರೆದು ಕೊಂಡು ಹೋದನು. ಆಕೆ ಇಷ್ಟರ ತನಕ ನಾಲ್ಕೈಗು ಚಿತ್ರಗಳಲ್ಲಿ ಭಾಗ ವಹಿಸಿದ್ದಾಳೆ. ಅವಳಾರು ಗೊತ್ತೇ- ಲೂಯಿಸ್ ರೈನರ್!

---

Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi.

ಶ್ರಾವಣ ಮಾಸ

# ಹಬ್ಬಗಳ ಸುಗ್ಗಿ

ಸೋಣ ತಿಂಗಳು

## ಈ ಅಪೂರ್ವ ಸಂದರ್ಭದ ಲಾಭದಾಯಕ ವ್ಯಾಪಾರವನ್ನು ಬಿಡಬೇಡಿರಿ.

ನಿಮ್ಮ ಹಣಕ್ಕೆ ತಕ್ಕ ಮಾಲು

ತಾ. 28—7—38ರಿಂದ
ತಾ. 16—9—38ರ ವರೆಗೆ

ಅನೇಕ ತರದ ಇನಾಮುಗಳು

## ಕೇವಲ 51 ದಿನಗಳು

ಶ್ರಾವಣ ಮಾಸ ಮತ್ತು ಸೋಣ ತಿಂಗಳ ಹಬ್ಬಗಳಲ್ಲಿ

# ಊದುಬತ್ತಿಗಳು

ಎಲ್ಲರಿಂದಲೂ ಉಪಯೋಗಿಸಲ್ಪಡುತ್ತವೆ. ಅಂದ ಮೇಲೆ ನಮ್ಮ ಈ ಹೊಸ ಯೋಜನೆಯನ್ನು ಪ್ರತಿಯೊಬ್ಬರೂ ಉಪಯೋಗಿಸಿರಿ.




ಒಂದಾಣೆ ಊದುಬತ್ತಿ ವ್ಯಾಪಾರಕ್ಕೊಂದರಂತೆ
ಲಕ್ಕಿ ಟಿಕೇಟುಗಳು ಕೊಡಲ್ಪಡುತ್ತವೆ.
ತಾ. 25-9-38ರಲ್ಲಿ ಆ ಟಿಕೇಟುಗಳಿಗೆ

**101**




## ಇನಾಮುಗಳು ಹಂಚಲ್ಪಡುವವು.

ಇನಾಮು ಇರುವ ನಂಬರದ ಟಿಕೇಟಿನವರು 15-10-38ರ ಒಳಗೆ ಇನಾಮುಗಳನ್ನು ಪಡಕೊಳ್ಳಬೇಕು. ಆ ಮೇಲೆ ದೊರೆಯಲಾರದು.



# ಸುವಾಸಿನಿ ಊದುಬತ್ತಿಗಳ
*(Regd.)*



ಎರಡಾಣೆ ಪಾಕೇಟ್ ಪಡಕೊಳ್ಳುವವರಿಗೆ ಕೂಡಲೇ ಯಾವುದಾದರೊಂದು ಇನಾಮು ಕೊಡಲ್ಪಡುತ್ತದೆ. ಇವರಿಗೆ ಪ್ರತ್ಯೇಕ ಲಕ್ಕಿ ಟಿಕೇಟು ಇಲ್ಲ.

ಊದುಬತ್ತಿ ವ್ಯಾಪಾರದಲ್ಲಿ ಅನೇಕ ವರ್ಷಗಳ ಅನುಭವವುಳ್ಳ ನಮ್ಮ
## ಶ್ರೀ ಭಾರತ ವಸ್ತುಮಂದಿರ ತೇರಬೀದಿ ಉಡುಪಿ
ಇಲ್ಲಿಂದಲೇ ನಿಮಗೆ ಬೇಕಾದ ಊದುಬತ್ತಿಗಳನ್ನು ಪಡಕೊಳ್ಳಿರಿ.

ಸಪ್ಲೈ ಏಜನ್ಸಿ ಲಿಮಿಟೆಡ್
ಉಡುಪಿ.

S. U. Paniady,
ಮೆನೇಜಿಂಗ್ ಡೈರೆಕ್ಟರ್.

This page is available for advertisement Rate Rs. 20. (per insertion)

# ವಿಶೇಷ ತರದ ಯೋಜನೆ



## ಅಂತರಂಗದ

ಚಂದಾದಾರರೂ, ಏಜೆಂಟರೂ, ಪ್ರಕಟನೆ ಕೊಟ್ಟವರೂ ಸರಿಯಾಗಿ ಗಮನಿಸಿ ಎಲ್ಲರೂ ಪ್ರಯೋಜನ ಹೊಂದಬೇಕಾಗಿ ವಿನಂತಿ.

**ದಿ ಕೆನರಾ ಇಂಡಸ್ಟ್ರಿಯಲ್ ಎಂಡ್ ಬೇಂಕಿಂಗ್ ಸಿಂಡಿಕೇಟ್ ಲಿಮಿಟೆಡ್**

ಇವರು ತಮ್ಮ ಯಾವತ್ತು ಬ್ರಾಂಚುಗಳಲ್ಲಿ 'ಅಂತರಂಗದ' ಬಾಬ್ತು ಹಣವನ್ನು ಕಮಿಶನ್ ವಿನಾ ಪಡಕೊಳ್ಳುವಂತೆ ವ್ಯವಸ್ಥೆ ಮಾಡಲಾಗಿದೆ.

ಆದುದರಿಂದ ಸದ್ರಿ ಬೇಂಕಿನ ಉಡುಪಿ ಆಫೀಸಿನಲ್ಲಿ ಇರುವ 'ಅಂತರಂಗದ' ಲೆಕ್ಕಕ್ಕೆ ಹಣ ಕಳುಹಿಸುವಂತೆ ಹೇಳಿ ಯಾರೂ ಸದ್ರಿ ಬೇಂಕಿನ ಬ್ರಾಂಚುಗಳ ವಶ ಕೊಡಬಹುದು.

### ಸದ್ರಿ ಬೇಂಕಿನ ಬ್ರಾಂಚುಗಳು:

ಬೊಂಬಾಯಿ, ಬೆಂಗಳೂರು, ಬೆಳಗಾಂವಿ, ಬ್ಯಾಡಗಿ, ಬಳ್ಳಾರಿ, ಅದೋನಿ, ಹೊಸಪೇಟೆ, ನಂದ್ಯಾಲ, ಪ್ರೊದತ್ತೂರು, ತಾಡಪತ್ರಿ, ತಲಿಪರಂಬಾ, ಹುಬ್ಬಳ್ಳಿ, ಗದಗ, ಮಂಗಳೂರು, ಕನ್ನಾನೂರು, ಪಯ್ಯನೂರು, ಕಾಂಞಂಗಾಡ್, ಕಾಸರಗೋಡು, ಕಾರ್ಕಳ, ಉಡುಪಿ, ಉಪ್ಪಿನಂಗಡಿ, ಕಾರವಾರ, ಕುಮಟಾ, ಅಂಕೋಲ, ಹೊನ್ನಾವರ, ಭಟ್ಕಳ, ಶಿರಸಿ, ಸಾಗರ, ಕುಂದಾಪುರ, ಬ್ರಹ್ಮಾವರ, ಹಂಗಾರಕಟ್ಟೆ, ನಿಪ್ಪಾಣಿ, ತುಮಕೂರು, ಹಿಂದುಪುರ.

**Subscriptions and other dues of ANTARANGA may be sent through any branch of the Canara Industrial & Banking Syndicate Limited, free of cost.**

ಈ ಪುಟವು ಪ್ರಕಟನೆಗೆ ದೊರೆಯುತ್ತದೆ. ದರ ರೂ. ೨೦ (ಪ್ರತಿ ಬಾರಿ)